(೧೧ ನೇ ಪ್ರ[illegible]ಟನ

ಮೂರನೆಯ ವರುಷದ ಮೂ[illegible]

# ಬೇತಾಳಗಳ ಕುಣಿತ

ಅಥವಾ

## ಸಿದ್ಧಸಭೆಯ ಕಾರ್ಯಕಲಾಪಗಳು

ಬರೆದವರು :

ಖ. ಹೆ. ಶ್ರೀಧರ ಎಂ. ಎ.

ಪ್ರಕಾಶಕರು :

ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

ಪ್ರ ಕಾ ಶ ಕ ರು :
ಎಂ. ಎಚ್. ರಾವ್
ಸರ್ವೋದಯ ಸಾಹಿತ್ಯ ಮಾಲೆ,
ಹು ಬ್ಬ ಳ್ಳಿ

★

ಮು ದ್ರ ಕ ರು :
ಎಸ್. ವ್ಹಿ. ಶ್ರೇಷ್ಠಿ
ರಾಯಲ್ ಪ್ರಿಂಟಿಂಗ್ ಪ್ರೆಸ್
ಹು ಬ್ಬ ಳ್ಳಿ

★

ಮೊದಲನೆಯ ಆವೃತ್ತಿ
೧೫, ಫೆಬ್ರುವರಿ, ೧೯೫೧

ಬೆಲೆ : ೧—೦—೦

# ಪ್ರಕಾಶಕರ ಮಾತು

"ಬೇತಾಳಗಳ ಕುಣಿತ" ಅಥವಾ 'ಸಿದ್ಧ ಸಭೆಯ ಕಾರ್ಯಕಲಾಪಗಳು" ಎಂಬ ವಿಡಂಬನ ಕೃತಿ ಸರ್ವೋದಯ ಸಾಹಿತ್ಯಮಾಲೆ (ಹುಬ್ಬಳ್ಳಿ)ಯಲ್ಲಿ ಅರಳಿರುವ ಮೂರನೇ ವರುಷದ ಮೂರನೇಯ ಪುಷ್ಪ. ಇದನ್ನು ಬರೆದ ಶ್ರೀ ಬ ಹೆ ಶ್ರೀಧರ ಎಂ ಎ ಇವರನ್ನು ಅರಿಯದ ರಸಿಕರು ವಿರಳ. "ಮೇಘನಾದ", "ಅಮೃತ ಬಿಂದು" ಮೊದಲಾದ ಅವರ ಕವನ ಸಂಗ್ರಹಗಳು ಈಗಾಗಲೇ ಅಚ್ಚಾಗಿವೆ "ಕರ್ಮವೀರ" ವಾರಪತ್ರಿಕೆ (ಹುಬ್ಬಳ್ಳಿ)ಯ ಉಪಸಂಪಾದಕರಾಗಿ ನಾಡುನುಡಿಯ ಸೇವೆಗೈಯುತಿದ್ದಾರೆ ಕರ್ನಾಟಕದ ಇನ್ನಿತರ ಪತ್ರಿಕೆಗಳಲ್ಲೂ ಅವರ ಕವನ ಮತ್ತು ಲೇಖನಗಳು ಆಗಾಗ ಪ್ರಕಟವಾಗುತ್ತಿವೆ ಅವರು ತಮ್ಮ ಈ ವಿಡಂಬನ ಸಾಹಿತ್ಯಕೃತಿಯನ್ನು ನಮ್ಮ ಒಡ ಪ್ರಕಟನ ಸಂಸ್ಥೆಗೆ ಕೊಟ್ಟು ನೆರವಾದುದಕ್ಕಾಗಿ ಕೃತಜ್ಞರಾಗಿದ್ದೇವೆ ದೇವರು ಅವರಿಗೆ ಆಯುರಾರೋಗ್ಯಯಶಗಳನ್ನು ನೀಡಲಿ

ಈ ಗ್ರಂಥಕ್ಕೆ ಇದಕ್ಕಿಂತಲೂ ಉತ್ತಮ ಕಾಗದ ದೊರಕಿಸಲು ಅನಾನುಕೂಲವಾದುದಕ್ಕಾಗಿ ವಿಷಾದವಾಗುತ್ತದೆ ದೇಶ ವಿದೇಶಗಳಲ್ಲಿ ಮತ್ತೆ ಯುದ್ಧದ ಕಾರ್ಮೋಡ ವ್ಯಾಪಿಸಿರುವುದರಿಂದ ಕಾಗದದ ಸಂಗ್ರಹ ಕಳ್ಳಪೇಟೆಯಲ್ಲಿ ಅಡಗಿದೆ ಅದು ದೊರೆಯುವುದೇ ಕಷ್ಟ. ದೊರೆತರೂ ಅದರ ಬೆಲೆಯೂ ಮಿತಿಮೀರಿ ಏರಿದೆ ಅಷ್ಟು ಬೆಲೆ ತೆತ್ತು ಪುಸ್ತಕಗಳನ್ನು ಮುದ್ರಿಸುವ ಚೇತನವಿಲ್ಲ ಗ್ರಂಥಮಾಲೆಯ ಆರ್ಥಿಕ ಸ್ಥಿತಿ ನಿರಾಶಾದಾಯಕವಾಗಿದೆ. ಹಿಡಿದ ಒಂದು ಕೈ-ಕಾರ್ಯವನ್ನು ನಡುನೀರಿನಲ್ಲಿ ಬಿಟ್ಟುಬಿಡಬಾರದೆಂಬ ಒಂದು ಛಲದಿಂದ, ಗಾಳಿಮಳೆ ಬಿಸಿಲು ನಿಂದೆ ತೊಂದರೆಗಳನ್ನು ಲೆಕ್ಕಿಸದೆ ನಡೆಸಿಕೊಂಡು ಬರುತ್ತಿರುವುದಲ್ಲದೆ ಅನ್ಯಥಾ ಅಲ್ಲ. ಆರ್ಥಿಕ ಪರಿಸ್ಥಿತಿ ಸುಧಾರಿಸಿದಂತೆ ಅಧಿಕ ಪುಟಗಳನ್ನೂ ಸರ್ವಾಂಗ ಸುಂದರವಾದ ಗ್ರಂಥಗಳನ್ನೂ ಕೊಡಲು ಶಕ್ಯವಾದೀತು! ಈ ಆಶೆ ಬರಿಗನಸಾಗದಂತೆ ಮಾಡುವುದು ಉದಾರಿಗಳಾದ ನಮ್ಮ ಜನರ ಸ್ನೇಹ, ಸಹಕಾರ, ಸಹಾಯವನ್ನು ಅವಲಂಬಿಸಿದೆ. ದೇವರು ಸರ್ವರಿಗೂ ಸನ್ಮತಿಯನ್ನು ದಯಪಾಲಿಸಲಿ!

ಹುಬ್ಬಳ್ಳಿ
ಫೆಬ್ರುವರಿ, ೧೯೫೧

ಪ್ರಕಾಶಕರು

# ಸಿದ್ಧ ಪತ್ರ

ಕೃಷ್ಣಾವತಾರದಲ್ಲಿ ನಾನು ಜಗತ್ತಿನ ಚರಾಚರಗಳಿಗೆ ಕೊಟ್ಟ 'ಯದಾ ಯದಾಹಿ ಧರ್ಮಸ್ಯಗ್ಲಾನಿರ್ಭವತಿ ಭಾರತ ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ಎಂಬ ಆಶ್ವಾಸನದ ಮೇರೆಗೆ ಈಗ ಮರಳಿ ಸಿದ್ಧಾವತಾರಿಯಾಗಿ ಕರ್ನಾಟಕದಲ್ಲಿ ಅವತರಿಸಿ ಜನಾರಣ್ಯದ ನಡುವೆ ನನ್ನ ಆಶ್ರಮವನ್ನು ಸ್ಥಾಪಿಸಿದ್ದೇನೆ ಜನಗಣದ ಅಧಿನಾಯಕನಾದ ನಾನು 'ಸಹಸ್ರ ನಾಮ'ದ ಅನೇಕ ಹೆಸರುಗಳಿಂದ ಸುಪರಿಚಿತನಾಗಿದ್ದೇನೆ ನಿಮಗೆ

ನನ್ನ ಆಶ್ರಮದಲ್ಲಿ ಯುಗಧರ್ಮಾನುಸಾರವಾಗಿ ಕಲೆ, ರಾಜಕಾರಣಗಳ ಹುಚ್ಚು ಹಿಡಿದ ಮಾನವ ಬೇತಾಳಗಳ ಚಿಕಿತ್ಸೆ ನಿತ್ಯವೂ ನಡಯುತ್ತದೆ ಹಳ ಹೊಸ, ಪಾಶ್ಚಾತ್ಯ ಪೌರಸ್ತ್ಯ ವಿಚಾರ, ಆಚಾರ, ಸಮಾಚಾರಗಳ ವಿಶ್ವರೂಪದ ತಾಂಡವದ ದಿನಚರಿಯ ವರದಿಯನ್ನು ನಮ್ಮ ಕಾಯದರ್ಶಿಯವರಿಂದ ಈ ವರದಿಯ ಸಂಗ್ರಾಹಕರು ಪಡೆದು ನಿಮ್ಮ ಮುಂದಿಟ್ಟಿದ್ದಾರೆ. ದ್ವಿಪಾದ ಚತುಷ್ಪಾದಗಳಲ್ಲಿ ಸಾಮಾನ್ಯವಾಗಿ ಅಂತರ ಕಡಿಮೆಯಾದುದರ ನಿದರ್ಶನಗಳನೇಕ ಇಲ್ಲಿಯ ದಿನಚರಿಯಲ್ಲಿ ದೊರಕಬಹುದು Man is the most dangerous vermin on the face of the Earth ಮನುಷ್ಯ ಜಂತುವು ಜಗತ್ತಿನಲ್ಲೆಲ್ಲ ಅತ್ಯಂತ ಅಪಾಯಕಾರಿಯಾದ ಹುಳು ಎಂದ ಆಂಗ್ಲ ವಿಡಂಬನಕಾರನ ಸುಂದರೋಕ್ತಿಯನ್ನು ಬಲ್ಲ ನಿಮಗೆ ಈ ಭವರೋಗಭೇಷಜನ (Mender of badsouls) ಚಿಕಿತ್ಸಾಲಯದಲ್ಲಿ ಕಾಣುವ ಮನೋರೋಗಿಗಳ ಮರುಳುತನಗಳ ಮಹಾಮಾಯೆಯ ಪ್ರಕ್ಷೇಪಣದಿಂದ ನಗ್ನಸತ್ಯದ ಗೊಮ್ಮಟ-ಛೆ ಛೆ ಹಾಗಲ್ಲ-ಹಾಲಿವುಡ್ ಶಾಖಾಮಣಿಯ ಸಾಕ್ಷಾತ್ಕಾರವಾಗಬಹುದು ಈ ದರ್ಶನದಿಂದ ಅರ್ಜುನನಂತೆ ನೀವು ಭಯಭ್ರಾಂತರಾದೀರಿ, ಕುರುಡರಾದೀರಿ ಎಂದು ತಿಳಿದು ನಿಮಗೆ ಈ ಮೂಲಕ ದಿವ್ಯ ಚಕ್ಷುಸ್ಸನ್ನು ಅನುಗ್ರಹಿಸಿದ್ದೇನೆ!

ಸತ್ಯ, ಸೌಂದರ್ಯ, ಸೌಜನ್ಯ, ಸದುಪಯೋಗವೆಂಬ ಚತುರ್ಮುಖ ಗಳಿಂದ ನನ್ನ ನಾಭಿಕಮಲದಲ್ಲಿ ಜನ್ಮಿಸಿದ ಆಧುನಿಕ ಬ್ರಹ್ಮನ ಪಿಸ್ಸೃಷ್ಟಿ ವಿಲಾಸ, ವೈಜನ್ಯ, ವಿಲಕ್ಷಣೋಪಯೋಗಗಳೆಂಬ ಮಾನಸ ಪುತ್ರರ ವಿಜ್ಞಾನ, ಸಾಮ್ಯ, ಅಂಗಭ್ರಮೆ ಮತ್ತು ಸಿನೆಮಮತಗಳ ವಿಡಂಬ ನೀಯ ವಿರಾಡ್ರೂಪಗಳ ಈ ಸಂತೆಯಲ್ಲಿ ಕರ್ನಾಟಕದ ಕವಿ, ಗಮಕಿ, ವಾದಿ, ವಾಗ್ಮಿ ಪ್ರವರರನ್ನು ಗುರುತಿಸಬಲ್ಲಿರಾ? ಲೇಖಕ, ವಿಮರ್ಶಕ, ಭಾಷಣಭೈರವ, ವಿಜ್ಞಾನವೀರ, ತತ್ತ್ವಜ್ಞಾನಪಾರಾವಾರಪಾರೀಣರ ಪಡಿನೆರಳನ್ನು ಕಾಣಬಲ್ಲಿರಾ? ಜನೋದ್ಧಾರ, ವನೋದ್ಧಾರ, ಸಮಾಜೋ ದ್ಧಾರಗಳ ಚಿತ್ರಪುತ್ರಿಕೆಯರ ಚಂಚರೀಕ ದೃಷ್ಟಿಗಳ ಚಮತ್ಕಾರಗಳನ್ನು ಅರ್ಥಯಿಸಬಲ್ಲಿರಾ?

The world is a vanity fair ಪ್ರಪಂಚ ಎಂಬುದೊಂದು ದಂಭದ ಸಂತೆಯಾಗಿರುವುದರಿಂದಲೇ ಹಾಸ್ಯರತ್ನವಾದ ವಿಡಂಬನ ಕಲೆಗೆ ವಿಶ್ವವ್ಯಾಪಿಯಾದ ಅವಕಾಶ ದೊರಕಿದೆಯಲ್ಲವೆ? ಅಂಥ ವಿಡಂಬನ (ವ್ಯಂಗ್ಯ, ವಕ್ರ, ಧ್ವನಿಬದ್ಧ) ಕರ್ಕಾಲಂಕಾರರೆನಿಸಿದ ನನ್ನ ಸಹೋ ದ್ಯೋಗಿಗಳಾದರೂ 'ಯದ್ಯದ್ವಿಭೂತಿ ಮತ್‍ಸತ್ತ್ವಂ ಶ್ರೀ ಮದೂರ್ಜಿತ ಮೇವ ವಾ। ತತ್ತದೇವಾವ ಗಚ್ಛ ತ್ವಂ ಮಮತೇಜೋಂಶಸಂಭವಂ' ಎಂದು ಹಿಂದೆಯೇ ಹೇಳಿರುವಂತೆ ನನ್ನ ಹೃದಂಶ ಚಿದಂಶಗಳೇ ಸರಿ ಈ ನನ್ನ Cruel kindness ನಿರ್ಭರ್ತ್ಸನಾಂತರ್ಗತ ಕರುಣೋಪದೇಶಗಳ ಅತಿ ಪರಿಣಾಮಕರವಾದ ದಿವ್ಯೌಷಧಾಮೃತವನ್ನು ಶ್ರದ್ಧಾಭಕ್ತಿಸಮನ್ವಿತರಾಗಿ ಗುಟುಕರಿಸಿದ ಭಕ್ತರು ಈ ದಿನಚರಿಯಲ್ಲೇ ಕಾಣುವಂತೆ ಬೇತಾಳಚಕ್ರ ದಿಂದ ಮುಕ್ತರಾಗಿ ದಿವ್ಯ ಮಾನವರೆನಿಸಿದ್ದಾರೆ ಅದೇ ಮೇರೆಗೆ ನೀವಾ ದರೂ ಗುರುಭಕ್ತಿನಿರ್ಭರರಾಗಿ 'ಅಕ್ಕಲ್‍ಕಾ ದುಕಾನ್' ಎಂದು ಅಖಿಲ ಭಾರತದಲ್ಲಿ ಜನಪ್ರಿಯವಾಗಿರುವ ಈ ಸಿದ್ಧಾಶ್ರಮಕ್ಕೆ ಎಲ್ಲ ವಿಧದ ಆಪ ತ್ಕಾಲದಲ್ಲಿಯೂ ಕಾಣಿಕೆಸಹಿತವಾಗಿ ಅರ್ಜಿ ಮಾಡಿಕೊಂಡರೆ ಮರುಟಪ್ಪಾ ಲಿಗೆ ಮನಸ್ಸಿನ ಆರೋಗ್ಯ ಸಂಪಾದನೆಗೆ ಸಹಾಯಕವಾಗುವ ಅರಿವಿನ ಗುಳಿಗೆಗಳನ್ನು ಕಳಿಸಲಾದೀತು!

ಹರಿ-ಹರದಾಸರ ತುಮುಲತಾಂಡವಗಳಿಂದ ಜರ್ಝರಿತರಾಗಿ ಪ್ರಾಮಾಣಿಕರು ಕರ್ನಾಟಕ ಮಾತೆಯ ಕಲ್ಪೆದೆಯ ಮೇಲೆ ತಲೆಜಜ್ಜಿಕೊಂಬ ಕಪಾಲಶೂಲ ಯೋಗದ ಸಂದರ್ಭದಲ್ಲಿ ಸಿದ್ಧರು ಮರುಳಾದರೂ ಮರುಳರು ಸಿದ್ಧರಾಗುವುದು ಖಂಡಿತ ಸಾಧ್ಯವಿಲ್ಲ ಬೂದಿಯ ಗುಡ್ಡೆಯ ಮೇಲೆ ಶ್ವಾನ ಮಲಗಿದರೆ ಕೈಲಾಸ ಕಂಡೀತೇ? ಗೋಪೀಚಂದನವನ್ನು ತಿಂದರೆ ಗೋವರ್ಧನವನ್ನು ಎತ್ತಲಾದೀತೇ? ಶಬ್ದಬ್ರಹ್ಮನ ಗವಿಯಲ್ಲಿ ಗೂಡಾರದ ಕವಿಗಳು ಗೊರಕೆ ಗರ್ಜನೆಗಳನ್ನು, ಹಾಕಿದರೆ ಕಾಯ ಸಾಧನೆಯಾದೀತಲ್ಲದೆ ಕಾರ್ಯಸಾಧನೆಯಾಗದು ಮೇದೋವೃದ್ಧಿಗೆಂದೇ ಸತತವಾಗಿ ಮೇಧೋವ್ಯಯ ಮಾಡಿದರೆ ಮೇಧೋವೃದ್ಧಿಯಾಗುವುದುಂಟೇ? ಇಂಥ ಪ್ರಕರಣದಲ್ಲಿ ಅಕ್ಕಲ್ ಎಂಬ ಪದಾರ್ಥವು ಯುರೇನಿಯಮ್ಮಿಗಿಂತಲೂ ದುರ್ಲಭ ಮತ್ತು ಮಹಾರ್ಘ ಎನಿಸುವುದರಿಂದ ಲೋಕಾನುಗ್ರಹ ಬುದ್ಧಿಯಿಂದ ನಾನು ಅತ್ಯಲ್ಪ ಮೂಲ್ಯಕ್ಕೆ ಅದನ್ನು ಒದಗಿಸಿ ಕೊಡುವ ಆಶ್ವಾಸನವನ್ನು ಕೊಟ್ಟಿದ್ದೇನೆ.

ಸಿದ್ಧೋಽಹಂ ಸಿದ್ಧಕರ್ಮಾಹಂ
ಸಿದ್ಧಾತ್ಮಾ ಸಿದ್ಧಭಾವನಃ ।
ಸಿದ್ಧಜ್ಞಾನ ಪ್ರಯೋಗಜ್ಞಃ
ಸಿದ್ಧಿದಃ ಸಿದ್ಧವಾಗ್ರಸಃ ॥

ಮರುಳುಸಿದ್ಧಾಶ್ರಮ,
ಹುಬ್ಬಳ್ಳಿ
೧—೧—೧೯೫೧

—ಮರುಳುಸಿದ್ಧ

[ಮೇಲಿನ ಪತ್ರವನ್ನು ಇತರ ದಿನಚರಿ ಲೇಖನಗಳೊಡನೆ ದಯಪಾಲಿಸಿದ ಮರುಳುಸಿದ್ಧ ಮಹಾಮುನಿಗಳಿಗೆ ನಾನು ನಿರಂತರ ಕೃತಜ್ಞ,

—ಬಿ. ಎಚ್. ಶ್ರೀಧರ ಎಂ. ಎ.,
ಸಂಗ್ರಾಹಕ]

# ಮುನ್ನುಡಿಯ ಮುದ್ರೆ

ಗೆಳೆಯ ಶ್ರೀಧರರೂ ನಾನೂ ಸಿದ್ಧಮಠಕ್ಕೆ ಸೇರಿ ಹಲವು ವರ್ಷಗಳಾದವು. ಮುಮುಕ್ಷುಗಳು, ಸಾಹಿತಿಗಳು, ಕಳ್ಳರು–ಎಲ್ಲರಿಗೂ ಗುರುಗಳು ಬೇಕೇ ಬೇಕು. ಅವರು ಮಠವನ್ನು ಸೇರಿಕೊಳ್ಳುವದು ತೀರ ಸಹಜ. ನಮ್ಮಿಬ್ಬರಿಗೂ ಒಮ್ಮೆ ಆಪತ್ಕಾಲವೊದಗಲಾಗಿ, (ರೇಶನ್ ಕೋಟಾ ಮೂರೇ ದಿನಗಳಲ್ಲಿ ತೀರಿಹೋಗಿ) ಒಬ್ಬ ಗುರುವಿನ ಗುಲಾಮರಾಗಬೇಕೆಂಬ ಜ್ಞಾನೋದಯವಾಯಿತು. ಅರವಿಂದ ತತ್ವವನ್ನು ಅಪ್ಪಿಕೊಂಡು ಪಾಂಡಿಚೇರಿಗೆ ಹೋಗಬೇಕೋ, ಗಾಂಧೀಪಂಥ ಹಿಡಿದು ಸೂತ್ರಯಜ್ಞ ಮಾಡಬೇಕೋ ಎಂಬಿವೇ ಮೊದಲಾದ ಹಲವಾರು ಪ್ರಶ್ನೆಗಳು ಮೂಡಿ, ಕೊನೆಗೆ ಕುರುಳುಸಿದ್ಧಯ್ಯನವರ ಮಠಕ್ಕೆ ಸೇರಿಕೊಂಡೆವು.

ಅಲ್ಲಿ ನಾವು ನೂರಾರು ಜ್ಞಾನ ( ಮತ್ತು ಭೋಜನ ) ಸತ್ರಗಳನ್ನೇರ್ಪಡಿಸಿದ್ದೆವು–ಪೂಜ್ಯ ಸ್ವಾಮೀಜಿಯವರ ಪಾದಕಮಲದ ಕೆಳಗೆ. ಆಗ ಮಹಾಸ್ವಾಮಿಗಳು ಅಪ್ಪಣೆಕೊಟ್ಟ ಅನುಭವಾಮೃತ ಬಿಂದುಗಳಲ್ಲಿ ಮತ್ತು ಅವರೆದುರಾದ ಚರ್ಚೆಗಳಲ್ಲಿ ಇಷ್ಟನ್ನಾಯ್ದು ಗೆಳೆಯ ಶ್ರೀಧರರು ಇಲ್ಲಿ ಕೊಟ್ಟಿದ್ದಾರೆ. ಸ್ವಾಮೀಜಿಯವರು ಮುಟ್ಟದ ವಿಷಯ (ಗಡ?) ಇಲ್ಲ. ಅಜ್ಞೇಯದಿಂದ ಅಜೀರ್ಣದ ವರೆಗೆ ಅವರ ದಿವ್ಯದೃಷ್ಟಿಯ ವಾಗ್ಝರಿಯ ತರಂಗಗಳು ಹಾಯುತ್ತಿದ್ದವು. ಗೆಳೆಯ ಶ್ರೀಧರರು ಸಂಗ್ರಹಿಸಿದ ಈ ಜ್ಞಾನಸನಿಧಿಗೆ ನಾನು ಮುನ್ನುಡಿಯ ಮುದ್ರೆ ಒತ್ತಬೇಕೆಂದು ಅವರ ಬಯಕೆ. ಎತ್ತಿನ ಎರಡು ಕೋಡುಗಳಂತೆ, ಕತ್ತೆಯ ಎರಡು ಕಿವಿಗಳಂತೆ ಒಂದೇ ಗುರುವಿನ ಶಿಷ್ಯದ್ವಯದಲ್ಲಿ ಒಬ್ಬನಾದುದರಿಂದ, ಇದು ನನ್ನ ಹಕ್ಕು ಎಂದರೂ ಸರಿಯೆ—ಒಪ್ಪಿದೆ, ಬರೆದಿದ್ದೇನೆ

ಇಲ್ಲಿ ಏನಿದೆ ಏನಿಲ್ಲ ಎಂಬುದನ್ನು ಓದಿಯೇ ತಿಳಿಯಬೇಕು. ಗುರುವಿನ ಘನತೆಯನ್ನು ಘೋರವಾಗಿ ಹೊಗಳುವದಾಗಲಿ, ದೋಷವನ್ನು ಗುರುತಿಸುವದಾಗಲಿ ಸಭ್ಯ ಶಿಷ್ಯರಿಗೆ ಸಲ್ಲದು. ಒಂದು ಮಾತನ್ನುಮಾತ್ರ ಹೇಳದೆ

ಗತಿಯಿಲ್ಲ. ಇದೊಂದು ಸರ್ವಾರ್ಥಸಿದ್ಧಿ ಕವಚದಂತಿದೆ. ಸಕಲ ರೋಗಗಳಿಗೆ ಇಲ್ಲಿ ಪರಿಹಾರ ಹೇಳಿದೆ. ರೋಗವನ್ನೇ ಆರೋಗ್ಯವೆಂದು ನಂಬಿ ಕಣ್ಣು ಮುಚ್ಚಿ ಕುಳಿತರೆ ಕಿವಿಯನ್ನೇ ಉದ್ದವಾಗಿಸಿ ಬೀಜಮಂತ್ರ ಊದುವ ಶಕ್ತಿ ಇದಕ್ಕಿದೆ. ಎಚ್ಚರಿಕೆ—ಎಚ್ಚರಿಕೆ!

ಧಾರವಾಡ
೧೮—೧—೫೧ } —ವಿ. ಜಿ. ಭಟ್ ಎಂ. ಎ.

(ಮೋ ೧೫೭) ಮುಂದಿನ ಪ್ರಕಟನೆ

# ಚಂದ್ರಲೋಕಕ್ಕೆ ಮಾನವ ಯಾತ್ರೆ

( ಕಾದಂಬರಿ )

ಲೇಖಕಿ: ಸೌ|| ಸರೋಜಿನಿ, ಮುಂಬಯಿ

# ಬೇತಾಳಗಳ ಕುಣಿತ

## ಅಥವಾ

## ಸಿದ್ಧ ಸಭೆಯ ಕಾರ್ಯಕಲಾಪಗಳು

ಈ ದಿನ ಎಂಥಾ ದಿನ ಅನ್ನುತ್ತೀರಿ? ಬರೀ ಮೋಡ, ಮುಗಿಲು—ಮೋಡ, ಮುಗಿಲು! ಬಿಸಿಲೂ ಇಲ್ಲ, ಅತ್ತ ಮಳೆಯೂ ಇಲ್ಲ ಸೆಕೆಯೆಂದರೆ ಸೆಕೆ ನಮ್ಮ ಅರಣ್ಯಾಶ್ರಮ ಈಗ ಸ್ಥಳಾಂತರ ಹೊಂದಿದೆ ಅಟ್ಟದ ಮೇಲೆ ಕಚೇರಿ ಗಾಳಿ, ಗಾಳಿ, ಗಾಳಿ! ಇಂತಹ ಸಮಯದಲ್ಲಿ ಒಬ್ಬ ಸಂಪಾದಕ ಮಹಾಶಯರು ಕೆಲವು ಪುಸ್ತಕಗಳನ್ನು ಹಿಡಿದುಕೊಂಡು ಗಾಳಿಯಂತೆ ಬಂದುಬಿಟ್ಟರು 'ವಡಬಾಗ್ನಿ ಜಡೆವೊತ್ತುದೋ ಸಿಡಿಲು ಹೊಸಭಸಿತವಿಡ ಕಲಿತುದೋ' ಎಂಬಂತೆ ಭಸ್ಮೋದ್ಧೂಲಿತ ವಿಗ್ರಹರಾದ ಅವರ ಧೀರ ಗಂಭೀರ ಮುದ್ರೆಯನ್ನು ಕಂಡು ಯಾರಾದರೂ ಗಂಭೀರ ಭಾವವನ್ನು ತಾಳಬೇಕು, ಹಾಗಿತ್ತು ಅವರ ಆಗಿನ ನಿಲುವು ಪುಸ್ತಕಗಳನ್ನು ನನ್ನೆದುರಿಟ್ಟು—'ಮಹಾಶಯಾ ಕನ್ನಡ ಸಾಹಿತ್ಯದ ಕಥ ಇಲ್ಲಿಗೆ ಬಂತೇ? ಕೇವಲ ಅನುವಾದ, ಅನುವಾದ, ಅನುವಾದ! ಅದೂ ಎಲ್ಲಾದರೂ ಹಳೆಯ ಆಂಗ್ಲ ಪತ್ರಿಕೆಗಳಲ್ಲಿಯ ಕಥೆಗಳ ಅನುವಾದ ಭಾಷೆಯೋ ಒರೆದವರ ಸ್ವಂತದ್ದು! ಇಂತಹ ಭಾಷಾಬ್ಬೆರವರ ಪುಸ್ತಕಗಳನ್ನು ವಿಮರ್ಶಿಸಿ ಕಣ್ಣೆಲ್ಲ ಕಾದುಹೋಗಿವೆ' ಎಂದು ತಮ್ಮಳಲನ್ನು ತೋಡಿಕೊಳ್ಳುವುದನ್ನು ನೋಡಿ ಬಹಳ ವ್ಯಸನವಾಯಿತು ಕೆಲಹೊತ್ತು ಗಂಭೀರವಾಗಿದ್ದು ಆ ಬಳಿಕ ಹೀಗೆ ಹೇಳಬೇಕಾಯ್ತು ಲೇಖಕರು ತಮಗೆ ಸಂಭಾವನೆ ಕೊಡಬೇಕೆಂಬುದನ್ನೇ ವಸ್ತುವಾಗಿಟ್ಟುಕೊಂಡು ಹರಟೆ, ಕಥೆ, ನಾಟಕ, ನೇರವಾದ ಪತ್ರ- ಈ ನಾನಾವಿಧದ ಸಾಧನಗಳಿಂದ ಸಂಪಾದಕರಿಂದ ಪಡೆಯಬಹುದಾದ ಸಂಪಾದನೆಗೆ ಹಾರೈಸಿ ಹಾರೈಸಿ, "ಹಾರೈಸಿದ್ದೆಲ್ಲವೂ ಹಳವಂಡವಾದ ಮೇಲಿನ್ನೇನಿನ್ನೇನು" ಎಂದು ಹಾಡಿ ಹಾಡಿ ಬೇಸತ್ತಿರುವಾಗ ನಿಮಗೆ ಬರುವುದಾದರೂ

ಎಂತಹ ಲೇಖನಗಳು? 'ಕಾಸಿಗೆ ತಕ್ಕ ಕಜ್ಜಾಯ'' ವಲ್ಲದೆ ಬೇರೇನು? ಇತ್ತೀಚೆಗೆ ಬಂಡವಾಲಗಾರರಾದ ಸಂಪಾದಕರು ಅಥವಾ ಪ್ರಕಾಶಕರು ಬಂಡವಾಲವಿಲ್ಲದೆ ಲಾಭ ಪಡೆಯಲು ಹವಣಿಸಿದರೆ ಮತ್ತೇನಾಗುವುದ? ಬೂದಿ! ಬೂದಿಯಲ್ಲಿ ಹೋಮ ಮಾಡಿದಂತೆಯೇ ಅಲ್ಲವೆ? ಈ ಮಾತನ್ನು ಎಷ್ಟು ಉಗ್ರವಾಗಿ ಹೇಳಿದರೂ ಸಾಲದು ಹೇಳುವುದು ಶಾಸ್ತ್ರ, ಹಾಕುವುದು ಗಾಳ ಎಂತಾದರೆ ಬರುವುದು ಬಂಡವಾಳವಿಲ್ಲದ ಬರಿಯ ಬಡಾಯಿಯಲ್ಲದೆ ಒಳ್ಳೆಯ ಪುಸ್ತಕಗಳೇ? ಲೇಖನಗಳೇ? ಕೋಪಿಸಿಕೊಳ್ಳಬೇಡಿ—

ಯಥಾ ಬೀಜ ಸ್ತಥಾ ವೃಕ್ಷಃ । ಯಥಾ ದಾನಂ ತಥಾ ಫಲಂ ॥
ಯಥಾ ಶ್ವಾನ ಸ್ತಥಾ 'ಬಾಲಃ'। ದಕ್ಷಿಣಾಭಾ ಪ್ರದಕ್ಷಿಣಾ ॥

Accidental coincidence--ಆಕಸ್ಮಿಕ ಸಂಯೋಗ ಉಂಟಾದಂತೆ ಲೇಖಕನೊಬ್ಬನು ಬಗಲಿನಲ್ಲಿ ಲೇಖನದ ಕಟ್ಟೊಂದನ್ನು ಹಿಡಿದುಕೊಂಡು ಅದೇ ಮರುಗಳಿಗೆಯಲ್ಲಿ ಪ್ರವೇಶಿಸಬೇಕೆ? ಇಂದೇನೋ ವಿಚಿತ್ರವಾಗಿದೆ ಎಂದುಕೊಂಡೆ! ಆತ ಒಂದು ಹರಟೆಯನ್ನು ಬರೆದುಕೊಂಡು ಬಂದಿದ್ದ, ಎಲ್ಲವರೂ ಬೇಡವೆಂದ ಸರಕು! ಪಾಪ-ಅವನು ಮಾಡಿದ್ದು ಅದನ್ನೇ! ಓನಾಮ ಬರೆಯುವುದು ಕಲಿಯುವಷ್ಟರಲ್ಲೇ ಕತೆ ಬರೆಯಲಿಕ್ಕೆ, ಹರಟೆ ಬರೆಯಲಿಕ್ಕೆ ಶುರು! ಏನಪ್ಪಾ "ಕುರಿತೋದದೆಯೂ ಕಾವ್ಯಪ್ರಯೋಗ ಪರಿಣತಮತಿಗಳ್'' ಎಂಬುದನ್ನು ಅಣಕಿಸಲೋ ಎಂಬಂತೆ ವ್ಯಾಕರಣದ ಮೇಲೆ ಪ್ರತೀಕಾರ ಮಾಡಲೆಂದೇ ಬರೆದಂತಿತ್ತು ಆ ಲೇಖನ "ಕರ್ಲಿ ಹೆಡ್ಡು ಕವೀಶ್ವರಗೆ" ಇತ್ಯಾದಿ ವರ್ಣನೆಗೆ ಸರಿಹೋಲುತ್ತಿದ್ದ ಆಧುನಿಕ ವಿದ್ಯಾವಂತ (?) ತರುಣನಿದ್ದನವ. ಏನು ಮಾಡುತ್ತೀರಪ್ಪಾ ಇಂತಹ ವಿದ್ಯಾವಂತರನ್ನು ಕಟ್ಟಿಕೊಂಡು? ಫ್ಯಾಸಿಜಂ, ನಾಜಿಝಂ, ಮಾರ್ಕ್ಸಿಜಂ ಎಂದು ದೊಡ್ಡ ದೊಡ್ಡ ಅರ್ಥವಾಗದ ಮಾತುಗಳನ್ನು ಅರ್ಥವಾಗದಂತೆ ವಿವರಿಸುವ ಆ ಹರಟೆಯನ್ನು ಓದಿದರೆ ಯಾರಿಗಾದರೂ ತಲೆ ಹ[illegible]ಯಾಗದಿರದು ವಿಶೃಂಖಲವೃತ್ತಿಯ ಪರಮಾವಧಿಯೋ ಎಂಬಂತೆ [illegible]ಸುವುದೊಂದೇ ಗುರಿ ಎಂದುಕೊಂಡು ತಲೆಹಾಕಿದ ಆ ಹುಡುಗ ಹಾಸ್ಯದ,

ಲೇವಡಿಯು, ಅಶುದ್ಧ ವಾಕ್ಯ ಪಂಕ್ತಿಗಳನ್ನು ತೆಗೆದುಕೊಂಡು ಅವನು ಏನು ಸಂಪಾದಿಸಿಯಾನು? "ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ" ಎಂಬುದನ್ನು ಮೂದಲಿಸುವಂತೆ ಹಲಗೆ ಒಳಪವನಲ್ಲ ಪಾರ್ಕರ್ ಪೆನ್ನುಗಳನ್ನುಪಯೋಗಿಸಿ ಬೌಂಡ್ ನೋಟು ಬುಕ್ಕುಗಳ ಮೇಲೆ ಒರೆದು ಪದವೀಧರರಾದವರೂ ಕೂಡ ಒಮ್ಮೊಮ್ಮೆ ತಮ್ಮ ಹೆಸರಿನ ಅಕ್ಷರಗಳನ್ನೇ ತಪ್ಪು ಬರೆಯುವುದನ್ನು ಕಂಡರೆ ಅವನನ್ನು ಭಸ್ಮೀಭೂತನನ್ನಾಗಿ ಮಾಡಬೇಕೆಂದು ಯಾವ ಲಕ್ಷ್ಮೀಶರು ಹೇಳರು? ಯಾವ ಮುದ್ದಣ್ಣರೆನ್ನರು? ಯಾವ ನಾರಣಪ್ಪರೆನ್ನರು? ಅಯ್ಯೋ ಮಗು, ತಪಸ್ಸಿಲ್ಲದೆ ಸಿದ್ಧಿಯಾಗದು--ಎಂದೆನ್ನಂತೆಯೇ ಬೂದಿಬಳಿದುಕೊಳ್ಳಬೇಕೆಂದಲ್ಲ ಹಳಗನ್ನಡ ಸಾಹಿತ್ಯವನ್ನು ಜೀರ್ಣಿಸಿಕೊಳ್ಳಬೇಕು ಹಾಗಲ್ಲದೆ ಹೀಗೆಂದರೆ? --

ನಾನು ಹರಟೆಗಾರ, ಕವಿ
ನನ್ನ ಬರಹ ಮೆಚ್ಚದವನು ದೊಡ್ಡದೊಂದು ಕಪಿ!
ನಾನು ಕಾಳಿದಾಸ ಗಾರ್ಕಿ—
ನನ್ನ ಬರಹವಚ್ಚುಮಾಡದವನು ಮೂರ್ಖ ಭವಿ!

* * * *

ಮಳೆಗಾಲ ಮುಗಿದು ಚಳಿಗಾಲ ಪ್ರಾರಂಭವಾಯಿತು. ಸಿದ್ಧಾಶ್ರಮದಲ್ಲಿ ಚಿಕ್ಕಾಟದ ಕಾಟ ಕಡಿಮೆಯಾಯಿತು ಆದರೆ ಭರತಖಂಡದಲ್ಲಿ ಜಿನ್ನಾನುಯಾಯಿಗಳ ಕಾಟ ಜಾಸ್ತಿಯಾಯಿತು ನಡುಮಧ್ಯಾಹ್ನದಲ್ಲಿ ಶರಣನೊಬ್ಬನು ಶರಗೆಂದ "ಊಟವಾಗಿಲ್ಲವೇನೋ?" ಎಂದು ಕೇಳಿದೆ. ನನ್ನವಳಿಗೆ ನಾನೇ ಅಡಿಗೆ ಕಲಿಸುವ ಪ್ರಸಂಗ ಬಂದಿದೆಯೆಂದ. ಕಲಿಕಾಲ ಎಂದ ಸೊಗಸಾಗಿರಬೇಕೆಂದು ಗಾಜಿನ ಪಾತ್ರೆಗಳನ್ನು ತಂದಿದ್ದರೆ ಒಡೆದು ಹಾಕಿಬಿಟ್ಟಿದ್ದಾಳೆ ಎಂದ. ಅಯ್ಯೋ! ಗ್ರಹಚಾರವೇ? ಸ್ವರಾಜ್ಯ ಕೊಟ್ಟರೆ ಆಳಿಕೊಳ್ಳುವ ಶಕ್ತಿ ಇಲ್ಲ ಪಾಕಿಸ್ಥಾನಿಗಳಿಗೆ ಆ ಅಡಿಗೆ ಮಾಡಲು ಬರದ "ಅಪ್ ಟು ಡೇಟ್" ಹುಡುಗಿಯರು ಒಲೆ ಮೇಲಿನ ಪಾತ್ರೆಯನ್ನು ಇಳಿಸುವಾಗ ಒಳಗಿದ್ದದ್ದನ್ನೆಲ್ಲಾ ಚೆಲ್ಲುವಂತೆ ರಾಜ್ಯಸೂತ್ರಗಳನ್ನು ತೆಗೆದು[illegible] ಜಿನ್ನಾಧಿಕಾರಿಗಳು ಕಾಶ್ಮೀರ್, ಜುನಾಗಡಗಳ ಪ್ರಕರಣದಲ್ಲಿ ಕೈಹಾ[illegible]

ಮುಚ್ಚಿಟ್ಟಿದ್ದರೆ ಕಾಗಿ ಬಂದು ತಿಂದುಕೊಂಡು ಹೋಯಿತು. ಅವರ ಎಂಜಲಾ ಯಾರು ತಿಂತಾರಂತೆ ಒಕ್ಕೊಟ್ಟೆ ಇದಕ್ಕೆ ಯಾರ್ಯಾರ ಏನ್ ಮಾಡ್ತಾರೆ?-- ಅಂದಳು ಈ ಶರಣಶರಣೆಯರ ಹುಸಿಜಗಳ ನಿಜವಾದ ಜಗಳವಾಗದಂತೆ ನೋಡಿಕೊಳ್ಳುವ ಭಾರ ನನ್ನ ಮೇಲೆ ಬಿತ್ತು ಹಿಂದುಸ್ತಾನದಲ್ಲಿ ಆಹಾರದ ಕೊರತೆ ಇರುವಾಗ, ಸಾವಿರಾರು ಜನರು ಉಪವಾಸ ಸಾಯುತ್ತಿರುವಾಗ, ಈ ಪ್ರಕಾರ ಯಾರಿಗೂ ಇಲ್ಲದ ಹಾಗೆ ಚೆಲ್ಲಿಕೊಟ್ಟದ್ದು ನ್ಯಾಯವಲ್ಲ ಇದರಿಂದ ಬಸಕ್ಕ ತಪ್ಪಿತಸ್ಥೆ ಎಂದೆ ಇದನ್ನು ಕೇಳಿ ಬಸವಯ್ಯ ಮೀಸೆ ಹುರಿಮಾಡಿದ ತನ್ನ ಪಂಥ ಗೆದ್ದಿತೆಂದು ಆದರೆ ಮತ್ತೆ ಹೇಳಿದೆ ಅಲ್ಲ ಹಿಂದುಸ್ತಾನದ ಹೆಂಗಸರಿಗಿಂದು ಗಂಡಸರು ಸರಿಯಾದ ವಿದ್ಯಾಭ್ಯಾಸ ಕೊಟ್ಟಿಲ್ಲ ಆದುದರಿಂದ ಅವರಿಗೆ ಜಗತ್ತಿನ ಇಲ್ಲವೆ ತಮ್ಮ ಸುತ್ತಮುತ್ತಲಿನ ಪರಿಸ್ಥಿತಿಯ ಅರಿವಾಗುವ ಬಗೆ ಹೇಗೆ? ಅವರಪ್ಪ ವಿದ್ಯಾಭ್ಯಾಸ ಮಾಡಿಸದಿದ್ದ ತಪ್ಪಿಗೆ ಗಂಡನೂ ಕೋಪದಿಂದ ಸುಮ್ಮನಿದ್ದರೆ ಸಂಸಾರ ಸಾಗುವುದು ಹೇಗೆ? ಅಂದ ಮೇಲೆ ಅದರಲ್ಲಿ ಬಸವಯ್ಯನದೂ ತಪ್ಪಿದೆ ಎಂದೆ ಅದನ್ನು ಕೇಳಿ ಬಸಕ್ಕನ ಮುಖದಲ್ಲಿ ಮುಗುಳ್ನಗೆ ಮೂಡಿತು ಅಲ್ಲಪ್ಪಾ, ಈ ಪರಿಸ್ಥಿತಿ ನಿನ್ನ ಸಂಸಾರದಲ್ಲಿ ಮಾತ್ರವಲ್ಲ, ನಮ್ಮ ರಾಷ್ಟ್ರದ ಪ್ರತಿಯೊಂದು ಮನೆಯಲ್ಲೂ ಇದೆ. ಎಲ್ಲರ ಮನೆಯ ದೋಸೆಯೂ ತೂತೇ ಎಂದೆ. ಅಷ್ಟರಲ್ಲಿ ಹಳ್ಳಿಯ ಹುಡುಗಿಯೊಬ್ಬಳನ್ನು ಕಟ್ಟಿಕೊಂಡಿದ್ದ ಪುಟ್ಟಣ್ಣ ದನಿಯೆತ್ತಿದ ಎಲ್ಲರ ಮನೆಯ ದೋಸೆ ತೂತಾದರೆ ನಮ್ಮ ಮನೆಯ ಕಾವಲಿಯೇ ತೂತಾಗಿದೆಯೆಂದ. ಅದೇಕೋ ಅಂತ ಕೇಳಿದರೆ, ಪಾಠ ಹೇಳಿಕೊಟ್ಟರೂ ತಲೆಗೆ ಹಿಡಿಯಲಿಲ್ಲ ಎಂದು ಅತ್ತ. ಕಲಿಕಾಲ! ಹೆಂಗಸರಿಗೆ ಆರ್ಥಿಕ ಸ್ವಾತಂತ್ರ್ಯ ಬೇಕಂತೆ, ಆದರ ಜವಾಬ್ದಾರಿ ಮಾತ್ರ ಬೇಡ ದುಡ್ಡು ಬೇಕು, ದುಡಿತ ಬೇಡ–ಎಂದು ಗೊಣಗಿದ. ಸ್ವಲ್ಪ ತಡೆ–ಎಂದೆ. ದಿನಾ ಇಲ್ಲಿಗೆ ನಿನ್ನ ಧರ್ಮಪತ್ನಿಯನ್ನು ಕರೆದುಕೊಂಡು ಬಾ ನನ್ನ ಎದುರಿಗೇ ಪಾಠ ಹೇಳು ಆಗ ಸರಿಹೋಗುತ್ತದೆ ಎಂದೆ.

ಮಾನವನಿಗೆ ಮಾನವೊಂದು ಅಡಿಕೆಯಷ್ಟಿದೆ,
ಎಲ್ಲರೆದುರು ಅದನು ಮುಚ್ಚಿಕೊಂಬ ಹುಚ್ಚಿದೆ,

ಅದರಲ್ಲೂ ಹುಡುಗಿಯರಿಗೆ ಮತ್ತು ಹೆಚ್ಚಿದೆ—!
ಅದನು ಬಳಸಿಕೊಂಡು ಹುಡುಗ ಬಾಳು ಬೆಚ್ಚದೆ!
ಆರು ದೂರಿದರೇನು, ಆರು ಬಯಸಿದರೇನು,
ದೂರವಾಗದು ದುಃಖ ತರುಣಜನಕೆ!
ಮಾರಾರಿ ಮನ್ಮಥನ ಸುಟ್ಟರೂ ಕೋಪದಲಿ,
ಗೌರಿಗರುಹಿದ ಪ್ರೇಮವೊಲಿದು ತಪಕೆ!
ನೀನು ಸತ್ತು ಸಗ್ಗ ಸೇರದಾರು ಸತ್ತರೇನಲಾ?
ಹೋಗು ಹುಡುಗ, ಸತಿಗೆ ಪಾರ ಹೇಳು ನಾರಿವತ್ಸಲ!

* * * *

ಜನವರಿ ಒಂದರಿಂದ ಮುಂಬೈ ಪ್ರಾಂತದಲ್ಲಿ ನಿಯಂತ್ರಣ ರದ್ದಾಗುವುದೆಂಬುದನ್ನು ಕೇಳಿ ಸಂಬಳದಾರರು ಸೊರಗಿಹೋಗಿದ್ದಾರೆ ವ್ಯಾಪಾರಿಗಳು ಮೋಸ ಶುರುಮಾಡುತ್ತಿದ್ದಾರೆ ಕಳ್ಳಪೇಟೆ ಹೋಗಿ ದರೋಡೆಪೇಟೆ ಬರಲಿದೆ, ಎಂದು ಅವರು ಹಿಗ್ಗಿದ್ದಾರೆ. ನಿಷ್ಪಾಪರಾದ ಜನರನ್ನು ಹಿಂಸೆಗೆ ಗುರಿಪಡಿಸಿದೆವೆಂಬ ಅಪರಾಧಕ್ಕೆ ಗುರಿಯಾದ ನಾವು-ಗುಂಡಾಜನಗಳು, ಆ ಪಾಪ ತೊಳೆಯುವುದಕ್ಕಾಗಿ ಧಾನ್ಯವನ್ನು ಸಂಗ್ರಹಿಸಿಕೊಂಡು ಯದ್ವಾತದ್ವಾ ಬೆಲೆಯೇರಿಸಿ ಮಾರುವ ವಣಿಗ್ವರ್ಗದ ಮೇಲೆ ಕೊಡಲಿ ಎತ್ತದಿದ್ದರೆ ನಮ್ಮ ಜಾತಿಗೇ ನಾವು ಕಲಂಕಪ್ರಾಯರಾದೇವು ಎಂದು ಮೊನ್ನೆ ನಡೆದ ಗುಂಡರ ಸಭೆಯ ಅಧ್ಯಕ್ಷಪೀಠದಿಂದ ಪ್ರಂಪತನಮಲ್ಲ ವಿಕ್ಟೋರಿಯಾ ಕ್ರಾಸ್ ಪಡೆದ ಗುಂಡೋವರ ನಾಯಕನು ಅಪ್ಪಣೆಕೊಡಿಸಿದನು. ಈ ಸುದ್ದಿ ನಮ್ಮ ಶರಣ ಸಾಹಿತ್ಯಕ್ಕೆ ಸೇರಿ ಸಿದ್ಧರ ಸಭೆಯಲ್ಲಿ ನಿನ್ನೆ ಪ್ರಕಟವಾಯಿತು ಬಹುಮತವು ಗುಂಡರನ್ನು ವಿರೋಧಿಸಿತು ಗಾಂಧಿ ಹೇಳಿದಂತೆ ನ್ಯಾಯವಾದ ರೀತಿಯಿಂದ ತಾವು ಕಾಳುಗಳನ್ನು ಮಾರುವೆವೆಂದು ತಮ್ಮಲ್ಲಿ ಜನರು ವಿಶ್ವಾಸವಿಡಬೇಕೆಂದು. ಅನೇಕ ವಣಿಕ್‌ಪುತ್ರ ಶರಣರು ಬೊಬ್ಬಿರಿದರು ಎಲ್ಲರೂ ಸಿದ್ಧಪೀಠದ ನಿರ್ಣಯವನ್ನು ಎದುರು ನೋಡುತ್ತಿದ್ದರು "ಶಿವಾಯನಮಃ ಎಂದೆ ಸತ್ಯಕ್ಕೆ ಸಾವಿಲ್ಲ, ಪ್ರಾಮಾಣಿಕರಿಗೆ ಅಂಜಿಕೆಯಿಲ್ಲ ವ್ಯಾಪಾರಿಗಳು ಪ್ರಾಮಾಣಿಕರಾದರೆ ಗುಂಡರು ಗುಂಡರಾಗಿ ಉಳಿಯುದು ಇಲ್ಲದೆ ಹೋದರೆ ಸರಕಾರವು ದಂಡನೀತಿಯನ್ನೂ, ಸಾಮಾನ್ಯರು ಗುಂಡ

ನೀತಿಯನ್ನೂ ಅನುಸರಿಸಿ ಪ್ರಜಾಸತ್ತೆಯ ಸತ್ವವನ್ನು ಪ್ರದರ್ಶಿಸಿ ಪ್ರಜಾಪೀಡಕರಿಗೆ ಬುದ್ಧಿಗಲಿಸದಿರರು ಗುಂಡರ ಹಾವಳಿ ಅರಾಜಕತೆಯೆಂದ ಹೇಳುವುದು ಇಂತಹ ಸಂದರ್ಭಗಳಲ್ಲಿ ತಪ್ಪಾಗುವುದು ಜನಮತವೇ ಜನಾರ್ದನ ಮತ ಮಹಾಜನರ ಮಾರ್ಗವೇ ಮಹಾಮಾರ್ಗ ಪ್ರಜೆಗಳೇ ಪ್ರಭುಗಳು ಹೀಗಿರುವುದರಿಂದ ಅಬದ್ಧಮಾರ್ಗಾಚರಣೆಯಲ್ಲಿ ಜನರು ಪ್ರಕೃತಿಸಹಜವಾದ ನಿಸರ್ಗ ಪ್ರೇರಿತವಾದ ಪ್ರವೃತ್ತಿಯಂತೆ ನಡದು ನ್ಯಾಯವನ್ನು ಕಸಿದುಕೊಳ್ಳುತ್ತಾರೆ ಇದನ್ನರಿತು ವ್ಯಾಪಾರಿಗಳು ಎಚ್ಚರಿಕೆಯಿಂದ ವರ್ತಿಸತಕ್ಕದ್ದು ನಗ್ನ ಸತ್ಯದ ಕಠೋರ ಪ್ರಹಾರದಿಂದ ಉಳಿಯ ಬೇಕೆಂಬವವರಿಗೆ ಇದು ಅಗತ್ಯವಾದುದು ಈ ನಿರ್ಣಯದಿಂದ ವ್ಯಾಪಾರಿವರ್ಗದಿಂದ ತುಂಬಿದ ನಮ್ಮ ಸಭೆಯು ಸ್ತಂಭೀಭೂತವಾಯಿತು ಆದರೆ ನನ್ನ ನಚ್ಚಿನ ಶರಣರು ಸಂತುಷ್ಟರಾದರು

ಗುಂಡರೇ ಉದ್ದಂಡ ವೀರರು ದೇಶಸೇವಕರಾದರೆ,
ಗಂಡರೇ ಗೌರವವಿಹೀನರು ನಾಡನೆದುರಿಸಿ ನಿಂತರೆ!
ಪಾಪ ಪರ್ವತಶೃಂಗವೇರಲು ತಾಪಸಿಯು ತಲ್ಲಣಿಪನು,
ಶಾಪವೇ ಸಂತ್ರಸ್ತರಿಗೆತಾ ಪಾಶುಪತವೆಂದೆನಿಪುದು ॥
ಕೇಳಿರಿ ಶರಣರಿರಾ,
ಕಲಿ-ಕಾಲದ ತತ್ವಗಳಾ,
ಕೈ ಸೋತಿಹ ನರನು,
ಕದ್ದರೆ-ಕಾಯಿದೆಯೇ ಅಹುದು !
ಬಹುಜನರೆದುರಿಸಿದ
ಗಂಡನು-ದಂಡನೆಗರ್ಹನಲಾ;
ನಗ್ನ ಸಮಾಜದಲಿ,
ಬಟ್ಟೆಯು-ನುಟ್ಟವ ಭಂಡನಲಾ !
ಮೆಟ್ಟಾದರು ಕೂಡ,
ತಲೆ ಮೇ-ಲಿಟ್ಟರೆ ಮುಂಡಾಸು,
ಕೆಟ್ಟಾತನು ಕೂಡ,
ಪರಹಿತ-ಗೈದರೆ ಪುಣ್ಯಾತ್ಮ !

   

ಒಂದೇ ಮಾತಿನಲ್ಲಿ ಹೇಳುವುದಾದರೆ ಬಂಡವಳಶಾಹಿ ನಿರ್ಮೂಲವಾಗಬೇಕು—ಎಂದು ಬಸವಣ್ಣ ಭಕ್ತ ಸಾಮ್ಯವಾದದ ಶಂಖನಾದ ಮಾಡಿಯೇ ಬಿಟ್ಟ. ಇಂದಿನ ಸಭೆಯಲ್ಲಿ ಅರೆ! ಕೋಟ್ಯಧೀಶ್ವರನ ಪುತ್ರ ಈ ರೀತಿ ಗರ್ಜಿಸುವುದೇನು! ಎಂದು ಶರಣವೃಂದ ಬೆಪ್ಪಾಯಿತು. ಮುಂದೆ ಭಕ್ತ ಮುಂದುವರಿಸಿದ—ಸಾಮ್ಯದ ಅರ್ಥ ಅನೇಕರಿಗಿಂದು ತಿಳಿಯದು. ಅದೇನೆಂದರೆ, ದೈವೀಸಾಮ್ಯ—ಐದು ಬೆರಳುಗಳು ಸಮನಾಗಿ ಸೇರಿ ಕೈಯೆನಿಸಿ ಕರ್ತವ್ಯ ನಿರ್ವಹಿಸಿದಂತೆ! ಸಾಮ್ಯವೆಂದರೆ ಎಲ್ಲ ಬೆರಳುಗಳನ್ನೂ ಒಂದೇ ಅಳತೆಗೆ ಕತ್ತರಿಸುವುದಲ್ಲ—ಎಂದೊಡನೆ ಸಭೆ ಆಶ್ಚರ್ಯಪಟ್ಟರೂ ನಿರುತ್ತರ ಮೌನ ತಾಳಿತು. ಅಷ್ಟರಲ್ಲಿ ಅಕ್ಕ ಮಹಾದೇವಿಯು ಭಕ್ತನೆದ್ದು ನಿಂತ ಮೊದಲಿನಾತ ಹೇಳಿದ್ದು ಅಪಲಾಪ. ಸಾಮ್ಯವೆಂದರೆ ಆರ್ಥಿಕ ಸಾಮ್ಯ. ಅರ್ಥ (ರೊಕ್ಕ) ದೈವಕೃತವಲ್ಲ, ಮಾನವಕೃತ, ಅದನ್ನು ಸರಿಪಡಿಸಲು ಮಾನವನಿಗೆ ಹಕ್ಕಿದೆ. ನಿಃಸ್ವಾರ್ಥಿಯೆಂದೂ ಅರ್ಥಸಾಮ್ಯಕ್ಕಂಜನು. ಐದು ಬೆರಳುಗಳ ಉದ್ದಳತೆ ಸರಿಮಾಡ ಹೋಗುವುದು ಮೂರ್ಖತನವಾದರೂ ಅವಶ್ಯಕ್ಕೂ ಆಯಾಪ್ರಮಾಣದಂತೆ ಒಂದಕ್ಕೂ ಶೋಷಣೆಯುಂಟಾಗದಂತೆ ತಾವು ತಿಂದ ಆಹಾರ ಸತ್ವವನ್ನು ದೇವರು ಹೇಗೆ ಒಯ್ದು ಪುಷ್ಟಿಸುವನೋ ಹಾಗೇ ದುಡಿತದಲ್ಲಿ (ದೈಹಿಕ ಇಲ್ಲವೆ ಮಾನಸಿಕ) ಸ್ಪರ್ಧೆ ನಿಲ್ಲಿಸಿ ಯಥಾಶಕ್ತಿ ಉತ್ಪಾದನಕ್ಕೆ ಯಥಾ ಯೋಗ್ಯ ಫಲ ದೊರಕಿಸುವುದೇ ಸಾಮ್ಯ—ಎಂದು ಬೊಬ್ಬಿಟ್ಟ. ಆ ಕೂಡಲೆ ಸಭೆ ಎರಡು ತಂಡಗಳಾಗಿ ಒಡೆದು ಕೂಗಾಟಕ್ಕಾರಂಭಿಸಿತು. ಅಷ್ಟರಲ್ಲಿ ಹಾಂ! ಎಂದು ತರ್ಜನಿಯೆತ್ತಿದಳು. ಪುನಃ ಶಾಂತಿಯುಂಟಾಯಿತು ಅನಂತರ ವ್ಯಾಖ್ಯಾನಿಸಿದೆ ಸಾಮ್ಯಕ್ಕಂಜುವವ ಉದಾರಿಯಲ್ಲ; ಉದಾರಿಯಾಗದವನಿಗೆ ಧನಿಕನಾಗಿ ಉಳಿಯಲು ಹಕ್ಕಿಲ್ಲ. ಹೆದರಿದಷ್ಟೂ ಸಾಮ್ಯ ಮೈ ಮೇಲೇರಿ ಬರುತ್ತದೆ. ಇದು ಜಗತ್ತಿನಲ್ಲಿಂದು ನಡೆವ ರೀತಿ. ಉದಾರಿ ಸಾಮ್ಯಕ್ಕಂಜನು. ಅಂಥವನನ್ನು ಸಾಮ್ಯ ಪ್ರತಿಭಟಿಸದು; ಹತ್ತಿರ ಸುಳಿಯದು. ಮಾನವರ ಪರಸ್ಪರ ತಿಳಿವಳಿಕೆಯಲ್ಲಿ ಸಾಮ್ಯವುಂಟಾದಾಗ ನಾಗರಿಕತೆ ಕ್ಷಿತಿಜಕ್ಕೇರುವುದು. ವೈವಿಧ್ಯ, ವೈಷಮ್ಯಗಳು ನಿಸರ್ಗ ನಿರ್ಮಿತ. ಆದರೆ ನ್ಯಾಯಾನ್ಯಾಯ ವಿವೇಕವು ಮನುಷ್ಯನನ್ನು ಮನುಷ್ಯನನ್ನಾಗಿ ಮಾಡಿದೆ [illegible]

ಸಂಜೀವಿನಿ ಆ ಸಂಜೀವಿನಿಯು ಸಾರವೇ ಅರ್ಥಸಾಮ್ರ ಇಕೋ ದಾಸ
ರೆನ್ನುತ್ತಾರೆ –

ಧನಿಕನಾಗುವುದೊಂದು ಪುಣ್ಯ । ಜನ
ಜನಕೊಲಿದೀಯುವ ಬುದ್ಧಿಯು ಗಣ್ಯ ॥
ಅನುಮಾನಪಡುವಾತ ಸತ್ತ । ದಿನ
ದಿನವು ಚಿತೆಗೆ ತುಪ್ಪವೆರೆವುದು ವಿತ್ತ ॥೧॥
ಕೋತಿ ರತ್ನವ ಕೊಂಡ ಹಾಗೆ । ಅದ
ಹೊತಿಟ್ಟು ಸಿರಿತನ ಮೆರೆಯುವ ನರಗೆ ।
ಭೀತಿ ಬಹಳ ಸಾಮ್ಯ್ರಜಗದ । ನವ
ನೀತಿಯು ತಿಳಿಯದ ನರ ಮನೆಹೊರಗೆ ॥೨॥
ನಿನ್ನದೆಲ್ಲವು ತನ್ನದೆಂಬ । ಹಸಿ
ಅನ್ಯಾಯದಾತನಿಗಿಂದಿದೆ ಪೆಟ್ಟು ।
ಜನ್ಮದಿ ದೊಡ್ಡವನೆನಿಪ । ಕ್ರೂರ
ಕರ್ಮಿಯ ಹೂಳುವರರಿ ನೀನೀಗುಟ್ಟು ॥೩॥

" ಸಂಸ್ಕೃತದಲ್ಲಿ ಶೂದ್ರಕ ಬರೆದ ಮೃಚ್ಛಕಟಿಕದಲ್ಲಿ ಶಕಾರನೊಬ್ಬ ವಿಕಾರವಾದ ಪಾತ್ರ ಈ ಕಲಿಯುಗದಲ್ಲಿ ನನ್ನ ಸತೀಶಿರೋಮಣಿಯೊಬ್ಬಳು ಜೀವಂತ ಶಕಾರಿಯಾಗಿ ಬಿಟ್ಟಿದ್ದಾಳೆ ಅಷ್ಟು ನೀವು ಬಂದರೂ ನನಗೆಚ್ಚರಾಗಲಿಲ್ಲ, " ಸತ್ತ ಹೆಣದ " ಹಾಗೆ ಬಿದ್ದಿದ್ದೆ ಎಂದು ಪ್ರಾರಂಭಿಸಿದವಳು, " ತಲೆ ಕೆಟ್ಟ ಹುಚ್ಚಾದ " ರಾಮಣ್ಣನ ಕತೆ ತೆಗೆದು, " ಗಂಡ ಸತ್ತ ವಿಧವೆ "ಯಾಗಿ ಅವನ ಹೆಂಡತಿ ನರಳುತ್ತಿರುವುದನ್ನು ಹೇಳಿ " ಹೊತ್ತು ಮುಳುಗಿದ ಕತ್ತಲೆ ' ಯವರೆಗೂ ಹರಟುತ್ತಿದ್ದಳು "-ಎಂದು ಶರ್ಮನೊಬ್ಬ ತನ್ನ ಗೆಳೆಯನೊಂದಿಗೆ ಹೇಳಿ ತನ್ನ ಹೆಂಡತಿಯ ವಾಕ್ಚಾ ಪಕ್ಕೆ ಹಿಗ್ಗುತ್ತಿದ್ದ ಅದನ್ನು ಕೇಳಿ ಹೀಗೆನ್ನಬೇಕಾಯ್ತು: ನಿನ್ನಂಥ ಹೆಣ್ಣು ಹುಡುಗರು ಹುಟ್ಟಿಯೇ ಹೀಗೆ " ವಿಸೀಸ ಹೊತ್ತ ಗಂಡಸರ " ಮಾನ ಹೋಗುವ ಹಾಗಾಯ್ತು. ಕೇವಲ " ಕದ್ದು ಕಳ್ಳರಾಗಿ " " ಯುದ್ಧ

ಕ್ಕಂಜುವ ಹೇಡಿ " ಯೆನಿಸಿದ ಜನ ಹೆಚ್ಚಾದುದರಿಂದಲೆ ಹಿಂದುಸ್ತಾನ
ವಿಂದು " ಶಕ್ತಿಯಿಲ್ಲದ ದುರ್ಬಲ " ರಾಷ್ಟ್ರವಾಗಿದೆ

ಹುಡುಗರಿಗೆ ಹುಡುಗಿಯರು ಬೇಕೆಂದಡಿಗಡಿಗೆ ಹಿಂದುಗಳು ನುಡಿದರು
ಹುಡುಗಿಯರ ನೀಹೊತ್ತು ಹಗೆಗಳು ಹೊತ್ತುಕೊಂಡೊಯ್ಯೆ।
ಎಡವಿ ಬೀಳುತ ಧಾವಿಸುವರೀ ನಡೆಗೆ ಭಾರತಜನಕ ನಾಚಿದ-
ನುಡಿಗೆ ಗಂಡಿನದಷ್ಟು, ಗುಂಡಿಗೆ ಗುಬ್ಬಿಗಂಜುವುದು ||

ಬೇಸಿಗೆಯಲ್ಲಿ ಒಣಮೋಡ ಸುಳಿದರೆ ವಾತಾವರಣ ಅನಾರೋಗ್ಯ ವಾಗುವುದೆನ್ನುತ್ತಾರೆ ಹಿರಿಯರು—ಹಾಗಾಯ್ತು ನಿನ್ನೆ ತುಂಬ ಸೆಕೆ ದುರ್ಜನರ ದರ್ಶನವಾದಷ್ಟು! 'ಅಪ್ಪಾ ಸಾಕು' ಎಂಬ ಉದ್ಗಾರ, ಮಂಟಪವನ್ನು ಪ್ರವೇಶಿಸುವಾಗ ಪ್ರತಿಯೊಬ್ಬನ ಬಾಯಿಂದ ಹೊರ ಬೀಳುತ್ತಿತ್ತು 'ನನಗಿಂದು ಎಷ್ಟು ಜನ ಗಂಗಾಧರರ ದರ್ಶನ ದೊರಕಿತು!' ಎಂದೆ ಸೆಕೆಯುನ್ನು ಮೀರಿ ಅವರ ಮುಖ ಕಿಂಚಿದ್ವಿಕಸಿತವಾಯಿತು ಸಿದ್ಧಪಾತ್ರದ ಉದಕಸೇವನವಾಗಿ ಕುಳಿತುದಾಯ್ತು

ಲಿಂಗಪ್ಪನ ತೊಡೆಯಮೇಲಿದ್ದ ಎಂಬ ಹಾಳೆಯ ಒಂದು ಪತ್ರಿಕೆಯನ್ನು ಸಂಗಪ್ಪ ಎಳೆದುಕೊಂಡು ತಿರುಹತೊಡಗಿದ 'ಏನೈತಿ ಇದರೊಳಗ? ಪೇಪರ್‌ನ್ಯಾಗ ಸುದ್ದಿ ಇರತಾವಪ, ಕತಿ, ಪದ, ಕಾಂಗ್ರೆಸು--ಹಿಂತಾವ ಇರೋದು ನೋಡೀನ್ರಪಾ ಇದೇನಿದರ‍್ಯಾಗ... ಶಾಸನ, ಆಸನ, ಏನೇನೋ ಬರದೈತಿ; ಅದರ್‌ಮ್ಯಾಕೆ ನವದ್ ಪೇಪರ್‌ನ್ಯಾಗ ಬಂದ ಏಕೀಕರಣ ಪಾಕೀಕರಣದ ಹಳೇಸುದ್ದಿ ಅಲ್ಲಿ ಇಲ್ಲಿ ಕದ್ದುಹಾಕ್ಯಾರ ಬೆಂಗಳೂರಿನ್ಯಾಗ ಪರಿಷತ್ತು ಅಂತ ಐತಿ, ಅದು ಇದನ್ನ ಹೊಂಡಸ್ತಾತಿ ಅಂತಾರಲ್ಲಾ—ಅದು ಖರೆವಾದ್ರ ಇರೋದ್ಹಿಂಗೇನ? ಎಂದು ಸಂಗಪ್ಪನ ರಾಗಯೆದ್ದಿತು. ನಾನೆಂದೆ "ದಿನ ಹೋದಹಾಗೆ ಹಿಂದುಸ್ಥಾನದ ಮಂದಿ ಹಿಂದುಸ್ಥಾನದವರಲ್ಲ ವಾಗುತ್ತಾ ಹೋಗುವಂತೆ ತೋರುತ್ತದೆ ನೀನು ಯಾಕೋ ಹಾಗೇ ಆಗು ತ್ತಿರುವಂತೆ ಕಾಣುತ್ತದೆ ಅದಿಲ್ಲದಿದ್ದರೆ ಹಿರಿಯರಾಜ್ಞೆಯೆಂದರೆ ವೇದಕ್ಕಿಂತ ಮಿಗಿಲೆಂದು ಹಿಂದುಸ್ಥಾನದ ಹಿರಿಯರು ಜನಗಳಿಗೆ ಕಂಠಪಾಠ, ಹಸ್ತ ಪಾಠ, ಮಾಡಿಸಿರುವಾಗ ನಾಡಿನ ಹಿರಿಯರು ನಡೆಸುವ ಪರಿಷತ್ತಿನ

ಸಾಪ್ತಾಹಿಕದ ಮೇಲೆ ಟೀಕೆ ಮಾಡುವುದೆಂದರೇನು? ಎಂಥ ಕಲಿತ ಬ್ರಾಹ್ಮಣನ ಮನೆಯಲ್ಲಾದರೂ ಹೆಂಗಸರಿಗೆ ಮಾತ್ರ ಬರುತ್ತದೆಯೇ? ತಿಳಿಯುತ್ತಿದೆಯೇ? ಹಾಗೇ ನಿಮ್ಮಂಥವರು ಎಂದಿಗಾದರೂ ಅಸಂಸ್ಕೃತರೇ ಎಲ್ಲರಿಗೂ ಎಲ್ಲವನ್ನೂ ಯಾವಾಗಲೂ ತಿಳಿಸಿ ಹೇಳಲು ಸಾಧ್ಯವಿಲ್ಲ, ದೊಡ್ಡವರು ಬರೆದದ್ದರಲ್ಲಿ ಏನೋ ಮಹತ್ವವಿರಬೇಕೆಂದು ಸುಮ್ಮನೆ ಕುಳಿರಬೇಕು ”

ಈ ಮಾತನ್ನು ಕೇಳಿದೊಡನೆ ಸಭೆಯಲ್ಲಿ ಮತ್ತೆ ಸೆಕೆಯ ಸಂಚಾರವಾಯಿತು ಆಗ ನಕ್ಕ ಸಭ ಎದೆ ಹಗುರಾದ ಮುಖಮುದ್ರೆಯನ್ನು ತೋರಿತು ಹೇಳಿದೆ

‘ದುಡ್ಡನ್ನು ಎಲ್ಲರಿಂದಲೂ ಕೇಳುತ್ತಾರೆ ಎಲ್ಲೋ ಕೆಲವರಿಗೆ ಮಾತ್ರ ಹಿತವೆನಿಸುವ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳುತ್ತಾರೆ– ಪರಿಷತ್ತಿಗರು! ಈ ಪತ್ರಿಕೆ ಹಿಡಿದುಕೊಂಡು ಹೋದರೆ ಇದನ್ನು ತೆಗೆದುಕೊಂಡು ಒಂದು ಮುಷ್ಟಿ ಮಂಡಕ್ಕಿಯನ್ನು ಕೂಡ ಯಾವ ವ್ಯಾಪಾರಿಯೂ ಹಾಕನು ಇದು ಅತಿ ಬುದ್ಧಿವಂತರ ಕಾರ್ಯಕೌಶಲ!

ಏರಿಸಿ, ಹಾರಿಸಿ, ಕನ್ನಡದ ಬಾವುಟ,
ಗದ್ದಲಿಸಿ, ಸಭೆಗಳಲ್ಲಿ ಮಾಡಿಬನ್ನಿರಾವುಟ!
‘ಏಳ್ ಕನ್ನಡತಾಯ್, ಬಾಳ್ ಕನ್ನಡ ತಾಯ್’
ಎಂದು ಕಾಗದದ ಅಷ್ಟದಿಕ್ಕಿನಲ್ಲಿ ಬರೆಯಿರಿ!
ದೂರಲೇನ್, ಆರು ವಿಷವಕಾರಲೇನ್ .
ಕನ್ನಡಿಗರೊಡತಿಗಾಗಿ ಬೇಡಿ ತನ್ನಿ ನಾಣ್ಯಮಂ,
ಕಾಡಿ ತನ್ನಿ ಕಾಸ್‌ಗಳಂ, ಲೆಕ್ಕಪತ್ರ ಪಟ್ಟಿಯಂ
ಜಾಣ್ಮೆಯಿಂದ ರಚಿಸಿ ಬಿಡಿ, ಕಾರ್ಯ ವೈವಿಧ್ಯಮಂ
ಬರಹದಲ್ಲಿ ಮೂಡಿಸಿ, ಸದಸ್ಯರನು ಕೂಡಿಸಿ,
ಕನ್ನಡನುಡಿ ಸೇವೆಯಾಯಿತೆನ್ನಬೇಕು ನಿಕ್ಕುವಂ
ಸಿರಿಗನ್ನಡಂಗೆಲ್ಗೆ—ಹುರಿಗಡಲೆಯುಂ ಮೆಲ್ಗೆ!



ಹೈದರಾಬಾದಿನಲ್ಲಿ ಹಾಗಾಯಿತು, ಹೀಗಾಯಿತು ..... ಅಂತ ಎಷ್ಟೋ

ಇದು—ಇಡೀ ದಿನ ಪೇಪರ್ ತುಂಬ ಇದೇ ಕರಟ ರಗಳೆ! ಒಮ್ಮೆಗಿಲೆ ಹಿಂದುಸ್ಥಾನ ಸೈನ್ಯ ಕಳುಹಿಸಿ ಆ ಮೂರು ಕಾಸಿನ ರಜಾಕಾರರ ಗುಲಾಮನ್ನ ಮನೆಗೆ ಅಟ್ಟಬಾರದೇ' ಎಂದು ಕಾಂತಪ್ಪ ಶಾನಭಾಗ ಕೂತಲ್ಲೇ ಮೀಸೆ ಹುರಿ ಮಾಡಿದ—'ಸಂಯುಕ್ತ ಕರ್ನಾಟಕ' ಓದಿ ಸಭಾಸದರಿಗೂ ಆ ಮಾತು ಅಹುದೆನಿಸಿರಬೇಕು, ಅವರು ಅದಕ್ಕೇ ತಮ್ಮ ಮೌನದ ಸಮ್ಮತಿ ಯನ್ನಿತ್ತಿದ್ದರು 'ಊರು ಮೇಲೆ ಊರು ಬಿದ್ದರೆ ಶಾನುಭೋಗರದೇನು ಹೋಯಿತು?' ಎಂಬುವ ನಿಜಾಮಶಾಹಿ ತಂತ್ರ 'ಊರು ಎಂದರೆ ಉಪ್ಪಿನ ಮಿಡಿ ಮೂರು' ಎಂಬುದು ರಜಾಕಾರರ ನೀತಿ ಎಂದು ನಮ್ಮ ಗಾದೆಪ್ಪ ಒಗ್ಗರಿಸಿದ ಸಿಡಿದೆದ್ದ ವೀರಪ್ಪಣ್ಣನಂತೂ 'ನಮ್ಮ ಗಡಿಯಲ್ಲೆಲ್ಲ ಕೊಲೆ, ಸುಲಿಗೆ ಮಾಡುತ್ತಿರುವ ಆ ಬಡ್ಡಿ ನ್ನ ಎಷ್ಟು ದಿನ ಅಂತ ಹಾಗೇ ಬಿಡ್ತಾರೋ ಯಾರಿಗೆ ಗೊತ್ತು ಮೊನ್ನೆ ನಮ್ಮೂರಿನಾಗ ಕವಣೆ ಏರಿಸಿದಿವಿ ಹ್ಯಾಂಗs ಇನ್ನು ಮ್ಯಾಲೆ, ರಾಮರಾಜ್ಯದ ಅಧಿಕಾರಿಗಳು ನಿದ್ರೆ ಮಾಡುತ್ತ ಕುಳಿತರೆ ರಾವಣ ರಾಜ್ಯದ ರಾಕ್ಷಸರಿಗೇನು ಅಡಚಣೆ? ಅವರು ನಡೆಸಿಯೇ ನಡೆಸುತ್ತಾರೆ ನಿಶಾಚರ ಲೀಲೆಯನ್ನ!' ಎಂದ ಆಗ ಅವರನ್ನು ಸಂತವಿಡಲು ಹೀಗೆಂದೆ—

ರಾಮರಾಜ್ಯದಲ್ಲಿ ಗಾಂಧಿ ಹಿಡಿದು ಜವಾಹರ ಮೊದಲ್ಗೊಂಡು ಸಾರಿ ದ್ದಾರಲ್ಲಾ-ಪ್ರತಿಯೊಬ್ಬನೂ ತಾನೇ ತನ್ನ 'ಆತ್ಮರಕ್ಷಣೆ' ಮಾಡಿಕೊಳ್ಳ ಬೇಕೆಂದು ಕಾಮಕೋ ಚೋರ್, ಖಾನೇಕೋ ಹಾಜರ್. ಶತ್ರುಗಳನ್ನು ಪ್ರತಿಭಟಿಸಬಾರದಂತೆ ಅದು ಸರಕಾರದ ಕೆಲಸವಂತೆ ಅದನ್ನದು ಬಾಯಲ್ಲಲ್ಲದೆ ಕೈಯಲ್ಲಿ ಮಾಡಿದುದು ಅಪರೂಪ ಆತ್ಮರಕ್ಷಣೆಗೆ ಅಹಿಂಸೆ ಯನ್ನು ಉಪಯೋಗಿಸಬೇಕು ರಾಂ ರಾಂ ಅಂದು ಬಿಟ್ಟರೆ ಎಲ್ಲ ಭಯ ರೋಗಾದಿಗಳು ನಾಶವಾಗುತ್ತವೆ. ಇವೇ ರಾಮರಾಜ್ಯದ ಸೌಕರ್ಯಗಳತ್ತ ಕಂದಾಯ ತನಗೆ ಬೇಕು, ಅಸ್ತ್ರಶಸ್ತ್ರ ತನಗೊಪ್ಪಿಸಬೇಕು. ರಕ್ಷಣೆಗೆ ಮಾತ್ರ ತಾನು ಸಿದ್ಧನಿಲ್ಲ. ಇದೇ ಇಂದಿನ ಸರಕಾರದ ಗಂಡಸುತನ ಹೀಗೇ ಮಾಡು[illegible] ಹೋದರೆ ಅಂತ್ಯದಲ್ಲಿ ರಶಿಯ ಇಲ್ಲವೆ ಅಮೇರಿಕ ದೇಶವು ಭಾರ[illegible] ಗುಳಕ್ಕೆನಿಸುವುದರಲ್ಲಿ ಯಾರೂ ಅಡ್ಡ ನಿಲ್ಲಲಾರರು! ಅಯ್ಯೋ, [illegible]

೧

ಷಂಡನಾದ ಗಂಡನನ್ನು ಕಂಡು ಬೆನ್ನು ಓಡಿದು ಹೋ(ದ
ಪುಂಡೆ ಪರರ ಕೈಗೆ ಸಿಕ್ಕು ಕಳೆದುಕೊಂಡಳೆಲ್ಲವ ।
ಹಿಂಡುಜನರು ಷಂಡನಾಯಕರನು ನಂಬಿ ತಮ್ಮದನ್ನು
ಕಂಡು ಕಂಡು ಕಳೆದುಕೊಳ್ಳುತಿರುವರೀ ದಿನ ॥

೨

ಸೂಳೆಗೇರಿಯಲ್ಲಿ ಹೋಗಿ ಸಾವಿರವನು ಕಳೆದುಕೊಂಡು
ಸುಬ್ಬಿಗಿಂತ ನಾಗಿ ಸತ್ಯವಂತೆಯೆಂದು ನಂಬಿಗ ।
ಅಷ್ಟು ಬಿಡಿಸಿಕೊಳಲು ಹೆಣಗಿ ಕಷ್ಟಪಟ್ಟನಂತೆ, ಪೇಲೆ
ಹತ್ತು ಸಾವಿರವನು ಕೊಟ್ಟು ಓಡಿಬಂದ ಹಳ್ಳಿಗ ॥

೩

ಮಂಗನೊಡನೆ ಕುರಿ ತನ್ನ ರೊಟ್ಟಿಯನು ಪಾಲುಮಾಡಿಕೊಳ
ಹೋಗಿತ್ತು
ತನ್ನದೆ ಎಲ್ಲವು ಎಂದು ಮಂಗ ಅದ ಕಸಿದುಕೊಂಡು ಮೇಲೇರಿತ್ತು॥
ಏರಿಹೋದ ಮರದಾಣ್ಮ ರೊಟ್ಟಿಯನು ತಿನ್ನುತ ಹಲ್ ಹಲ್
ಬಿಡುತ್ತಿತ್ತು,
ಕೆಳಗಿನ ಕುರಿ ಬ್ಯಾ ಬ್ಯಾ ಎಂದೊದರುತ ಕಣ್ಣುಗಳನು
ಬಿರುದೆರೆದಿತ್ತು!

* * * *

'ಕರ್ನಾಟಕ ಏಕೀಕರಣ' ಅಂದರೊಂದು ಮಾರಿಯಾಗಿ ಬಿಟ್ಟಿದೆ ಇಂದು-ಎಂದು ಶಂಕರ ಲಿಂಗೇಗೌಡರ ಅಣ್ಣನ ಮಗನ ಅಳಿಯನೆಂದ. 'ಗಾಂಧಿ ನಿಧಿ,ಆ ನಿಧಿ,ಈ ನಿಧಿಯ ಜೊತೆಗೆ ಈ ಮಾರಿಯದೂ ಒಂದು ನಿಧಿಯಂತೆ ಇದಕ್ಕೆಲ್ಲ ಹಣತೆತ್ತು ಹಗುರಾದರೆ ನಾಳೆ ನಿಧಿ ಕೊಡ್ಸೋ ಅಪ್ಸೋಳ್ಗೆ ಆರಾಮಾಕ್ಕೈತಿ-ಕುಂತು ಊಟ ಮಾಡೋದಕ್ಕೆ ಬಿಕ್ಷೆ ಬೇಡೋರ್‍ಯಾಕೆ ಹಿಂಗs ನಿಧಿ ಕೂಡ್ಸಾಕ ಹೊಂಡಬಾರದು? ಅದು ನಾಗರಿಕತನsನಪಾ ನಿಧಿ ಕೂಡ್ಸೋದು ನಾಗರೀಕ ಅದ ಅದು ಯಾಕಾರೇ ಕೂಡಿಹಳಿ-ಆ ಮಾತು ಬ್ಯಾರೆ!' ತಿಪ್ಪಣ್ಣ ಶಾಸ್ತ್ರಿಗಳು ಅಷ್ಟು ಹೊತ್ತಿಗೆ

ಪಂಚಾಂಗ ಎತ್ತಿ ಯುಗಾದಿ ಫಲ ಶುರು ಮಾಡಿಯೇ ಬಿಟ್ಟರು–'ಅಸ್ಮಿನ್ ಅಂದರೆ ನಿಧಿ ಕೂಡಿಸುವುದು ನಾಗರಿಕ ಧರ್ಮವಾಗುವುದು ಕಾರಣ, ಶನೈಶ್ಚರನು ನಿಧ್ಯಧಿಪತಿಯಾದದ್ದು ಶನೈಃ ಶನೈಃ ಮೆಲ್ಲಮೆಲ್ಲನೆ, ಚರನ್ ಚರಿಸುತ್ತ, ಶನಿಃ ಶನೈಶ್ಚರನು, ಪ್ರತಿವ್ಯಕ್ತಿಂ ಪ್ರಪೀಡಯೇತ್–– ಪ್ರತಿಯೊಬ್ಬನನ್ನೂ ನಿಧಿಗಾಗಿ ಕಾಡಿಸ್ಯಾನು' ಎಂದುದಕ್ಕೆ ಸಭಿಗ ಸಭೆಯೇ ನಕ್ಕು ಅಲ್ಲಾಡಿ ಹೋಯಿತು ಅಷ್ಟರಲ್ಲಿ ಬೀದಿಯ ದಾಸಯ್ಯನು ಗಂಟೆ ಬರುತ್ತಿರುವ ರವಿ ಕಿರಣಗಳೊಡನೆ ಸ್ಪರ್ಧಿಸುವ ತನ್ನ ತ್ರಿಪುಂಡ್ರವನ್ನು ಪ್ರದರ್ಶಿಸುತ್ತ ಶಂಖಕ್ಕೆ ಬಾಯಿ ಹಚ್ಚಿ ಒದರತೊಡಗಿದ –

ನಂಬದಿರು ಈ ದೇಹನಿತ್ಯವಲ್ಲ
ಅಂಬುಜಾಕ್ಷನಿಗಾಗಿ ನಿಧಿಯ ಸಂಗ್ರಹಿಸೋ ||ಪ||

ಬೇಡುವವ ನಾನಲ್ಲ | ನೀಡುವಳು ನೀನಲ್ಲ |
ಹಾಡುವವ ನಾನು ಆತನ ನಾಮವ |
ಕಾಡುಕಾಸನ್ನಾದ | ರಿತ್ತಲೆಸೆ ಒಡತಿ, ಆ
ಮೂಡುದೇವರ ನಿಧಿಗೆ ಒಪ್ಪಿಸುವೆನು ||೧||

ಗಾಂಧಿ ನಿಧಿ, ಬಾನಿಧಿ ನಿ | ರಾತ್ರಿತರ ನಿಧಿಯೆಂದು,
ಕರ್ನಾಟಕೈಕ್ಯನಿಧಿಯೆಂದು ಮತ್ತೆ |
ಒಂದುಮುಂದುಕೆ ತಿರುಪಿ | ಅದೆ ಹೆಸರು ಬೇಡುವರು
ಕೊಟ್ಟರಂಥವಗೆ ನೀನಷ್ಟೆ ಕತ್ತೆ ||೨||

ಬೆಟ್ಟದೊಡೆಯನ ಪಾದ | ಮುಟ್ಟಿ ಹೇಳುವೆ ತಾಯಿ,
ಎಷ್ಟು ಬಿಡಿಗಾಸಿದ್ದರೂ ಆತನ | ದೃಷ್ಟಿಗರ್ಪಣ ಮಾಡಿ |
ತಕ್ಕ ಪ್ರಸಾದವನೆನ್ನ ಹೊಟ್ಟೆಗೆಸೆಯುವೆ ಅನ್ನ ಪೂರ್ಣಮಾಡಿ ||೩||

ಅನ್ನಕ್ಕೆ ನಿಧಿ ಕೂಡಿ– | ಸವಲಕ್ಕಿಗೂ ಕೂಡಿ–
ಅಷ್ಟಚ್ಛಿಪಾಯಸಂಗುಳಿಗು ಮನುಜಾ |
ಅನ್ಯಾಯ ಗಿನ್ಯಾಯವಿಲ್ಲ ಲಂಗೋಟಿಗಾ |
ಸನ್ಯಾಸಿ ಕೂಡ ನಿಧಿ ಕೂಡಿಸುವನು ||೪||

ಮೂರು ಸಂಜೆಯ ಸಮಯ ಸಾಧಾರಣ ಸಿಃಬ್ಬ ಪಕ್ಕದ ಮನೆಯಿಂದ ಕೇಳಿ ಬರುತ್ತಿದೆ ‘ಇವಳ ಸೇದಬೇಕೋ, ಇವಳ ತಟ್ಟಬೇಕೋ’ ಮುಂತಾಗಿ ದೈವದ ಪಾತ್ರಿಯ ಗರ್ಜನೆ ಅವನೊಂದು ಕೂಲಿ ವಿಡಿಸುವ ಮಾಟ ಮಾಡುತ್ತಿದ್ದ ಅವನ ದನಿಗೆ ದನಿ ಸೇರಿಸುತ್ತ ‘ಇವರ ಕುಟ್ಟಬೇಕೋ, ಇವರ ಮೆಟ್ಟಬೇಕೋ’ ಎನ್ನುತ್ತ ಗಂಗಾರಾಮ ಪ್ರವೇಶಿಸಿದ ‘ಏನೋ ರಸಸಿದ್ಧಾ?’ ಎಂದೆ ಆದರ ಅವನೇನೂ ನಗೆಯಾಡುವ ಭಾವದಲ್ಲಿದ್ದಿಲ್ಲ ಒಂದೇ ಸಲ ಸಿಡಿದೆದ್ದು ಹೇಳತೊಡಗಿದ ಕನ್ನಡೇತರ ಭಾಷೆಯ ವಿವಿಧ ಉದ್ಯಮ ವ್ಯಾಪಾರಸ್ಥರು ಸ್ವಜಾತ್ಯನುಕೂಲ ಮತ್ತು ಕನ್ನಡ ನುಡಿ ಹುಟ್ಟು ಭಾಷೆಯಾಗಿರುವವರ ಪ್ರತಿಕೂಲ ಆಗುವಂತೆ ದೈನಂದಿನ ವ್ಯವಹಾರದಲ್ಲಿ ಪ್ರಕಟಪಡಿಸುವ ದುಸ್ಸಹವಾದ ಪಕ್ಷಪಾತ ಬುದ್ಧಿಗೆ ಏನು ಹೇಳಲ? ನಿನ್ನೆ ಪ್ರಯಾಣದಲ್ಲಿ ಅಂಥ ಅನುಭವ ನನಗಾಯಿತು ಈ ರೀತಿಯ ಭೇದಮಾರ್ಗವನ್ನು ಇನ್ನಿತರ ಕೊಡು-ಕೊಳುಗಳಲ್ಲೂ ಕಾಣಬಹುದು ‘ಕರ್ನಾಟಕದಲ್ಲಿ ಬಂದು ನೆಲಸಿದ ಇತರ ಭಾಷೆಯ ಜನರು ಅಲ್ಪಸಂಖ್ಯಾಕ ಭಾವನೆಯಿಂದ ಸ್ವಸ್ಥಾನ ರಕ್ಷಣೆಗಾಗಿ ಮೂಲ ನಿವಾಸಿಗಳಾದ ಕನ್ನಡಿಗರಿಗೆ ನಾನಾ ಕಾರ್ಯಕ್ಷೇತ್ರಗಳಲ್ಲಿ ಚಿಲ್ಲರೆಯಿಂದ ಮಹತ್ವದ ವರೆಗೆ ಕೊಡುವ ತೊಂದರೆಗಳನ್ನು ನಿಲ್ಲಿಸಲು ಉಪಾಯ ಗಾಣದ ಹೋಗಿರುವೆನಲ್ಲಾ?’ ಇದರ ಅನುಭವ ತನಗೂ ಆಗಿದ್ದರಿಂದ ತಾನು ಹೀಗೆ ಹೇಳಬೇಕಾಯ್ತು! ಎಂದ ರಂಗಣ್ಣ ‘ಮೀಸೆ ಹೊಕ್ಕಿತೆಂದರೆ ಸಾಕು, ಬೆಕ್ಕು ಸರಾಗವಾಗಿ ಒಳಕ್ಕೆ ಬಂದುಬಿಡುತ್ತದೆ ಬೆರಳು ಕೊಟ್ಟರೆ ಹಸ್ತ ನುಂಗುವುದೆಂದರೆ ಹೀಗೇ. ಉಂಡ ಮನೆಯ ಗಳು ಎಣಿಸುವ ಇವರ ಈ ಕ್ಷುದ್ರ ಬುದ್ಧಿಯನ್ನೂ ತೊಡೆದು ಹಾಕಲು ಒಂದೇ ಒಂದು ಮದ್ದಿದೆ ‘ನಗರಗಳನ್ನು ಅರ್ಥಾತ್ ನಗರಸ್ಥ ಸಂಸ್ಥೆಗಳನ್ನು ಕ್ರಮೇಣ ಇವರ ವರ್ಚಸ್ಸಿನಿಂದ ಹೊರಗೆಳೆಯತಕ್ಕದ್ದು. ಇದಕ್ಕೆ ಇನ್ನೊಂದು ಮಹೋದಾರಣ ಬೇಕೆಂದರೆ ಭಾರತದ ಕೆಲ ಮುಸಲ್ಮಾನ ಸಂಘಗಳ ವರ್ತನೆಗಳತ್ತ ಕೈಬೆರಳನ್ನು ನೀಡಬೇಕಾಗುತ್ತದೆ. ಕಣ್ಣು ತೆರೆದು ನೋಡಿ–

ಅಲ್ಪಸಂಖ್ಯಾಕರಲ್ಪತೆ ಮೆರೆಯಬೇಕು:
ಬೇಡಿಬೇಡಿದ ರಕ್ಷಣೆಗಳದಕೆ ಬೇಕು!

ಬಹುಜನರ ಬಹುಮಾನ ಬರಿದಾಗಬೇಕು,
ಇವರ ಗೌರವ ಹಿಮಾಲಯವಾಗಬೇಕು !
ನಿನ್ನ ಮನೆಯಲ್ಲಿನವರು ಧನಿಯಾಗಬೇಕು,
ನೀನಿವರ ಕಾಲೊತ್ತಿ ಸಣ್ಣಾಗಬೇಕು !
ಬೇಕು ಬೇಕೋ ಬೇಕು, ಎಷ್ಟಾಗಬೇಕು ?
ಕೂಟ್ಟುಳಿದುದೆಲ್ಲವನು ಕೊಟ್ಟು ಬಿಡಬೇಕು !

ಕರ್ನಾಟಕ ಏಕೀಕರಣ ಮುಂದಾಳುಗಳ ತಲೆಯಮೇಲೆ ವಜ್ರಾಘಾತ ಮಾಡಿಬಿಟ್ಟಿತೆಂದು ಎಲ್ಲೆಲ್ಲೂ ಹಾಹಾಕಾರವೆದ್ದಿರುವುದು ಇಂದು ನನ್ನ ಸ್ಮೃತಿಪಥಕ್ಕೆ ಬಂತು, ಬಂತು ಅಂದರೇನು, ತಂದು ಮುಟ್ಟಿಸಿದ ನಮ್ಮ ಕರಿಬಸಪ್ಪ ಅವನ ಮುಖದ ಮೇಲೆ ಬಿಳಿ ಛಾಯೆ ಮಾಡಿ ಹೋಗಿತ್ತು. ಮಹಾಕವಿ ಯಾರಾದರೂ ಕಂಡಿದ್ದರೆ ಅವನ ನಿರಾಶೆಯ ಬಿಳುಪನ್ನು “ಚಂದ್ರಿಕಾ ಸುಂದರೀ ವದನಾರವಿಂದ ಮಕರಂದ ಸುಧಾಕಿರಣ ಸ್ಫ್ಯೂತ ಕಾಂಡಪಟ ಸದೃಶ” ಎಂದು ಬಣ್ಣಿಸದೆ ಬಿಡುತ್ತಿರಲಿಲ್ಲ. ಆದರ ಆಗ ಬೂದಿಬಡಕನಾದ ನಾನಲ್ಲದೆ ಮತ್ತಾರೂ ಅಲ್ಲಿ ಇರಲಿಲ್ಲ. ಆದರೆ “ಕುಮಾರ ಸಂಭವ” ದಲ್ಲಿ ಪರಮೇಶ್ವರನ ಮೈಬೂದಿ ರತಿವಿಲಾಸದಿಂದ ಸವೆದು ದರ್ಪಣದಂತೆ ಮಿರುಗುತ್ತಿತ್ತೆಂದು ಬಣ್ಣಿಸಿದ್ದು ನೆನಪಾದ ಕೂಡಲೇ ಸ್ಫೂರ್ತಿ ಬಂದು ಆಕ್ಷಣದಲ್ಲಿ ನನ್ನ ಮೈಯ ಪ್ರತಿಯೊಂದು ಬೂದಿಯ ಕಣವೂ ಶಿವಗಣಗಳಂತೆ ಬೀಸುಗಾಳಿಗೀಡಾಗಿ ತಾಂಡವ ಮಾಡತೊಡಗಿದವು. ಭಾಷಾನ್ವಯ ಪ್ರಾಂತರಚನೆಯಿಂದ ಹಿಂದು ಸ್ಥಾನದ ಐಕ್ಯಕ್ಕೆ ಭಂಗ ಬಂದು, ಕೇಂದ್ರಸರಕಾರ ದುರ್ಬಲವಾಗಿ, ಪರದೇಶೀಯರು ದಂಡೆತ್ತಿ ಬಂದು ಯಾದವಿಯಲ್ಲಿ ತೊಡಗಿರುವ ಹಿಂದು ಸ್ಥಾನದ ಸ್ವಾತಂತ್ರ್ಯವನ್ನು ಕಸಿದುಕೊಂಡು ಹೋಗುವಂತಾದೀತೆಂಬ ದರ್ ಸಮಿತಿಯ ವಾದ ಸರಣಿಗೂ ಮಳೆಯಿಂದ ತಲೆಮರೆಸಿಕೊಳ್ಳಲು ಬಂದ ಕಾಕಕ್ಕ (ಗುಬ್ಬಕ್ಕನ ಮನೆಯಲ್ಲಿ) ಗೋಡೆಯ ಬದಿಯಲ್ಲಿ ಮಲಗೆಂದರೆ ಗೋಡೆ ಮೈಮೇಲೆ ಬೀಳುವುದೆಂದು, ಉಪ್ಪರಿಗೆಯಮೇಲೆ ಮಲಗೆಂದರೆ

ಮಾಡು ತಲೆಯ ಮೇಲೆ ಉರುಳುವುದು ಎಂದು ಮುಂತಾಗಿ ಮಾಡಿದ ಹದರಿಕೆಯ ಪಾದಸರಣಿಗೂ ವ್ಯತ್ಯಾಸವಿಲ್ಲ ಎಂದು ಎಲ್ಲರಿಗೂ ತೀರ್ಮಾನಿಸಿತು ಆದರೆ ಅವರಿಗೆ ಒಂದು ವಿಷಯ ಮಾತ್ರ ಹೊಳೆಯಲಿಲ್ಲ ಅದು ತೃಣಲೋಷ್ಟಾಶ್ಮಕಾಂಚನ ಗ್ರಂಥದಲ್ಲಿ ಹೇಳಿದೆ

ತೃಣದ ರಾಶಿಯ ಮೇಲೆ ಕಟ್ಟಿಗೆ
ಯೊಣಗಿಸಿರಲದ ತೆಗೆಯಬಾರದು,
ತೆಗೆಯೆ ತೃಣಗಳು ಹಾರಿಹೋಹವು ಗಾಳಿ ಬೀಸಿದರೆ ।
ಕಟ್ಟಿಗೆಯ ಮೇಲಿರುವ ಕಲ್ಲನು
ಎತ್ತಿದರೆ ಕಟ್ಟಿಗೆಗಳುರುಳ್ವವು
ಹುಲ್ಲು ಕಟ್ಟಿಗೆಗಳಿಗೆ ಕೂಡಬೇಕೆಂತು ಸ್ವಾತಂತ್ರ್ಯ ॥೧॥
ಕಲ್ಲು ಕನಕಗಳೊಟ್ಟಿಗಿದ್ದರೆ
ಕಲ್ಲು ಎಂದದ ಕಳ್ಳನೊಯ್ಯನು,
ಕಲ್ಲಬೇರ್ಮಾಡಿದರೆ ಕನಕವ ಕೊಳ್ಳದಿಹರಾರು ।
ಮಳ್ಳ ಕನ್ನಡ ರಾಂಧ್ರರಿನ್ನೂ
ಪೊಳ್ಳುಮರ ಹಟ್ಟರಿಗೆ ಪ್ರಾಂತವ
ಕೊಳ್ಳಿರನೆ ಭಾರತವ ಕಾಗೆಯು ಕಚ್ಚಿ ಸಾರಿಸದ ॥೨॥

* * * *

ಮಾಬಾಪ್ ಸರಕಾರ ಅನ್ನಿಸಿಕೊಂಡಿದ್ದಕ್ಕೋಸ್ಕರ ಪ್ರಜೆಗಳ ರಕ್ಷಣಭರಣಗಳಿಗೆಂದು ರೇಷನ್ ಜಾರಿಮಾಡಲಾಗಿದೆ ಎಂದುದಕ್ಕೆ ಒಮ್ಮೆಲೇ ನೆಟ್ಟಗೆದ್ದು ನಮ್ಮ ಯೀರಬಸವ್ವ ರೇಶನ್ನಿನ ವಂಚನಾಪ್ರಪಂಚವನ್ನು ಒಮ್ಮೆ ಕಂಡೂ ಪುನಃ ಪುನಃ ಅದರ ಪೀಡಾಪ್ರತಾಪವನ್ನರಿತರೂ ಮತ್ತೆ ಈಗ ರೇಶನ್ ತಂದಿರುವುದು ರಾತ್ರಿ ಕಂಡ ಬಾವಿಗೆ ಹಗಲು ಹಾರಿಕೊಂಡಂತೆಯೇ ಸರಿ ಎಂದು ಉದ್ಗರಿಸಿದಳು ಆದರೆ ಅವಳಿಗೆ ಒಂದು ವಿಷಯ ಅಪರಿಚಿತವಿತ್ತು ಅದನ್ನು ಎತ್ತಿ ಹೇಳಬೇಕೆಂದರೆ ಅದರ ಅರ್ಥವೇ ಹೊಳೆಯದೆನಿಸಿತು ಅದೊಂದು ಗಹನವಾದ ರಾಜಕಾರಣದ ತತ್ವಸೂತ್ರ, ಚಾಣಕ್ಯ ಗೋತ್ರದಲ್ಲಿ ಹುಟ್ಟಿದವರ ತಗಣಿಯ ಬುದ್ಧಿಗಳಲ್ಲದೆ

ಸಾಮಾನ್ಯ ವ್ಯಕ್ತಿಪಿಂಡಗಳಿಗೆ ಗೋಚರವಾಗುವಂಥದಲ್ಲ ಈ ವಿಷಯ. ಶರಣರೆಲ್ಲರಿಗೂ ತಿಳಿಯಲೆಂದು ಕ್ಷುದ್ರರಾಕ್ಷಸನಾಟಕದಿಂದ ಆ ಭಾಗವನ್ನು ಓದಿ ಹೇಳಿದ

ಭಾರತದ ಜನಸಂಖ್ಯೆ ಬಹಳವಾಗ್ಹೋಯ್ತು,
ಅದರಿಂದಲೇ ಇಂದು ಊಟಕ್ಕಿಲ್ಲಾಯ್ತು !
ಊಟಕ್ಕಿಲ್ಲದ ಜನದ ಜಂಭ ಹೆಚ್ಚಾಯ್ತು,
ಅದನಿಳಿಸಲೆಂದು ರೇಶನ್ನೆ ಬೇಕಾಯ್ತು !
ಮಕ್ಕಳನು ಹಡೆದವರು ನವನಂದರಲ್ತೆ ?
ಅವರ ರಾಕ್ಷಸತನವು ಹೆಚ್ಚಾಯಿತಂತ ?
ಅವರ ಬಂಧಿಸಲು ರೇಶನ್ ಹಗ್ಗ ಬೇಕು।
ಚಾಣಾಕ್ಯಸರಕಾರಕೆನ್ನಿರೊ ಪರಾಕು !
ಐರೋಪ್ಯ ಪದ್ಧತಿಯು ಆಪಳತ ಬೇಕು
ಕೈಗಾರಿಕೆಯು ಬಂದು ಕೃಷಿಯುಳಿಯಬೇಕು
ಆದರೂ ಆಹಾರ ಅಕ್ಷಯಿಸಬೇಕು
ಅಪ್ಪಚ್ಚಿ ಅಮ್ಮಣ್ಣಿ ಎರಡೂನು ಬೇಕು !
ಬಂಡವಾಳಿಗ ಬೇಕು ಬಡವನೂ ಬೇಕು,
ಹುಲಿಹಸುಗಳೆರಡೂನು ಒಟ್ಟಿಗಿರಬೇಕು!
ಹುಲಿಯು ಹಸುವನು ಕಚ್ಚಿ ತಿನ್ನುತಿರಬೇಕು,
ಹಸುಪಿಂಗ ಹೆದರಬೇಡೆನ್ನುತಿರಬೇಕು !

* * * *

ಬಹಳ ಚಳಿ ಅಂತ ಪೇಟೆಗ್ಹೋಗಿ ಶಾಲು ಖರೀದಿ ಮಾಡಬೇಕು ಅಂದರೆ ೧೭ ರೂಪಾಯಿ ಅಂದರು. ಕಂಬಳಿಗೆ ೧೨ ರೂಪಾಯಿ ಅಂದರು. ಸೆಕೆಂಡ್‌ಹ್ಯಾಂಡ್ ಮಿಲಿಟರಿ ರಗ್ಗಿಗೂ ೧೬–೧೮ ರೂಪಾಯಿಗಳು ಅಯ್ಯೋ ದೇವರೇ ಅಂತ ತಲೆಯ ಮೇಲೆ ಕೈಯಿಟ್ಟುಕೊಂಡು ಬಂದ ನಮ್ಮ ಬಯಲಪ್ಪ ಅಂತೂ ಚಳಿಗಾಲ ಬರೋದಕ್ಕೂ ಬಟ್ಟೆ ಕಂಟ್ರೋಲಾಗುತ್ತೆ ಅಂತ ವ್ಯಾಪಾರಿಗಳು ಬಟ್ಟೆ ಬೆಲೆ ಏರಿಸಿದ್ದಕ್ಕೂ ಬಹಳ ಗಂಟಾಯಿತು ! ಈ ಸಮಸ್ಯೆ ಬಹಳ ದೊಡ್ಡದಾಗಿ ಕಂಡಿತು ಬಯಲಪ್ಪನಿಗೆ ಅದನ್ನು

ತಂದು ನನ್ನ ವ್ಯಾಸಪೀಠದ ಮೇಲೆ ಭಯಭಕ್ತಿಯಿಂದ ಇರಿಸಿದ ಓಸ ಮಾಡಬೇಕು ಹೇಳಿ, ಈ ಚಳಿಯ ಸಮಸ್ಯೆಯನ್ನು ನೋಡಿ ಪಾ ಕಣ ಬೂದಿ ಇದ್ದರೂ ನನ್ನ ಮೈಯೆಲ್ಲ ಒಮ್ಮೆ ರೋಮಾಂಚನವಾಯಿತು ವಿದ್ಯುತ್ ಸಂಚಾರವಾದಂತಾಯಿತು ಆದರೆ ಯೋಗಾರೂಢರಿಗೆ ಚಳಿ ಬಿಸಿಲಿನ ಪರಿವೆಯುಂಟೇ? ಆ ಪ್ರಕಾರ ಆ ಚಳಿಯ ಸಮಸ್ಯೆಯನ್ನು ನಿಷ್ಪಕ್ಷಪಾತ ದಿಂದ ಪರಿಶೀಲಿಸ ಹೋದಾಗ, ಒಮ್ಮೆಲೇ ನನಗೆ [illegible] ನೆನಪಾಯಿತು

ಗುಡುಗುಡಿಯನು ಸೇದಿ ನೋಡೋ । ಅದ ।
ಹಿಡಿದುಮೈಗಡಸಿದ ಚಳಿಯ ನೀಡಾಡೋ ॥ ಪಲ್ಲ ॥
ಹೆಂಡ ದುರಾಭ್ಯಾಸವಂತೆ
ಮನೆ । ಗಂಡರ ಬಿಡುವುದು ಸಭ್ಯತೆಯಂತೆ ।
ಸಿಕ್ಕಿಬಿದ್ದವನೊಬ್ಬ ಕಳ್ಳ
ಕಣ್ಣು । ತಪ್ಪಿಸಿದಾತ ಹರಿಶ್ಚಂದ್ರನಂತೆ ।
ಹೇಡಿಗಳಾಚಾರಕಂಜಿ
ನೀವು । ಬೀಡಿಗಳನು ಬಿಟ್ಟು ನಡುಗಲು ಬೇಡಿ ॥೧॥
ಬಿಸಿಲಲ್ಲಿ ಮಾಡಬಾರದುದ
ಹಸಿ । ಚಳಿಯಲ್ಲಿಯೂ ಮಾಡಬಾರದೇಕಂತೆ ।
ಮರುಭೂಮಿಯಲಿ ಮಾಡದಿಹುದ
ಇಂಥ । ಮಲೆನಾಡಿನಲಿ ಮಾಡಬಾರದೇಕಯ್ಯ ?
ಬಟ್ಟೆ ಕೊಡುವ ಬಿಸಿಗಿಂತ
ಎದೆ । ಯಟ್ಟಿಯೊಳಿಹ ಹೊಗೆ ಬೆಚ್ಚಗಲ್ಲೇನು ? ॥೨॥

* * * *

ಗೋಡ್ಸೆ ಪ್ರಕರಣವನ್ನು ಇಷ್ಟುದ್ದ ಬೆಳೆಸಿ ಎಲ್ಲೆಲ್ಲೂ ಪ್ರಚಾರ ಮಾಡುವುದರ ಗುಟ್ಟೇನು ಎಂದು ಅನೇಕರಿಗೆ ತಿಳಿಯದಾಗಿದೆ ಅವನು ಯಾವ ದೊಡ್ಡ ಮನುಷ್ಯ, ಅವನ ಇತಿಹಾಸಕ್ಕೆ ಇಷ್ಟೇಕೆ ಪ್ರಾಶಸ್ತ್ಯ ಎಂಬ ವರಿಗೆ ದಡ್ಡತ್ತೆಯ ಕತೆ ಗೊತ್ತಿಲ್ಲ ದಡ್ಡತ್ತೆ ಅನ್ನ ಬಸಿಯುವಾಗ ತಪ್ಪಲಿಗೊಂದಿಷ್ಟು ತುಪ್ಪ ಹಾಕುತ್ತಿದ್ದಳು ಏಕೆಂದರೆ ಮಗಳಿಗೆ ಆ ತುಪ್ಪ

ಹಾಕಿದ ಅನ್ನ ಸಿಗಬೇಕು, ಸೂಸ ಪಾಲಿ ಗಂಜಿ (ತಿಳಿ) ಕುಡಿಯಬೇಕು ಎಂದು ಒದರೆ ತುಪ್ಪ ನೀರಾಗಿ ಒಸಿಯುವಾಗ ಗಂಜಿಯ ಪಾತ್ರೆಗೆ ಬೀಳುತ್ತಿತ್ತು ಅದರಿಂದ ತುಪ್ಪದ ಗಂಜ ಸೊಸೆಗಾಯಿತು, ತೊಟ್ಟು ಅನ್ನ ಮಗಳಿಗಾಯಿತು! ಗಾಂಧಿಯನ್ನು ಕೊಂದ ಅಪರಾಧಿಯು ಅಪರಾಧ ಜಗಜ್ಜಾಹೀರಾಗಲೆಂದು ಪ್ರಕರಣವನ್ನು ಒಂಬಿಸಿದರ ಗೋಡ್ಸೆಯ ಆತ್ಮಸಮರ್ಥನೆ ಬೆಳಕಿಗೆ ಬಂದು ಅವನ ದೇಶಹಿತಾಪೇಕ್ಷೆಯ ಅಂಶಗಳು ಪ್ರಕಟವಾಗುತ್ತಿವೆ ಅಂದರೆ ನಿತ್ಯ ಮುತ್ತೈದೆಯ ಗೀತದಲ್ಲಿ ಹೇಳಿದ ಹಾಗೆ ಆಯಿತು

(ಸಾಂಗತ್ಯ)

ರಾವಣನನುಕೊಂದು ರಾಮ ದೊಡ್ಡವನಾದ
ಎಂಬ ರಾಮಾಯಣದಲ್ಲ
ರಾವಣನಸಮಸಾಹಸವ ಬಣ್ಣಿಸಲಿಲ್ಲ
ವೇನು ಅದೇ ಶೈಲಿಯಲ್ಲಿ? ||೧||
ಮೊಲವ ಕೊಂದರ ಸಿಂಹ ವೀರನಾದೀತೇನು?
ಸಲಗವ ಕೊಲಲದು ವೀರ।
ಕೊಲೆಗೆಯ್ಯಲಂತಿಂಥ ನಾಡಾಡಿಗಳ ಗೋಡ್ಸೆ
ಕಲಿಯನಿಸುತ್ತಿದ್ದನೇನು? ||೨||
ಪಾಪಿಯಾಗಿಯು ದಶಕಂಠ ಮೂರೇ ಜನ್ಮ
ದಾಟಿ ವೈಕುಂಠಕ್ಕೆ ಹೋದ।
ತಾಪಸಿಗಳು ಕೋಟಿ ವರ್ಷ ದುಡಿದರೇನು
ಪೋಪರೆ ಬಯಸಿದ ಜಗಕೆ? ||೩||
ತಪ್ಪುಗಿಪ್ಪವಗಿಂತ ತಪ್ಪುಗಾರನೆ ಲೇಸು
ಒಪ್ಪೀತೆ ಕಲ್ಲನಂತಿರಲು?
ಸ್ವಲ್ಪವಾದರು ಸಾಹಸವ ಮಾಡಲು ಬರ
ದಲ್ಪಾತ್ಮ ಬದುಕಿಯು ಸತ್ತ! ||೪||
ಸತ್ತು ಬದುಕುವಂಥ ಸತ್ಯಾತ್ಮರಿಂದೇನು?
ಅತ್ತುಗೆಲ್ಲುವಳೆಂಥ ವೀರೆ?

ಉತ್ತಿಗೆಯುವುಕಲು ಬಲ್ಲವ ಗಳಿಸ್ಯಾನು
ಮತ್ತಪಕೀರ್ತಿ ಕೀರ್ತಿಗಳ । ॥೨॥
ಕೊಲ್ಲ ಬಲ್ಲವ ಕಾಯ ಬಲ್ಲನಲ್ಲದೆ ಬರಿ
ಕ್ಷುಲ್ಲಕನಿಂದಾದೀತೇನು ?
ಖುಲ್ಲರ ಕೊಲೆ ಕೀರ್ತಿ ತಂದರೂಳ್ಳಿದರನ್ನು
ಕೊಲ್ಲಲು ಸಾಹಸವಕ್ಕು । ॥೩॥

ತಮ್ಮ ಮನೆಯ ಕೂಸು ಪ್ರತಿಯೊಂದು ವಸ್ತುವನ್ನೂ ನಾಲಿಗೆಗೆ ತಗುಲಿಸಿ ನೋಡುವುದರ ಕಾರಣವೇನು? ಎಂಬುದು ಮೂರುಗಸ್ಸಿನ ಸಮಸ್ಯೆ ಅಲ್ಲವಯ್ಯಾ, ಹಿಂದುಸ್ಥಾನದಲ್ಲಿ ಪತ್ರಿಕೆ ಓದುವವರೆಲ್ಲ ರಾಜಕಾರಣಿಗಳೆನಿಸಿ, ಫ್ಯಾಶನ್ ಮಾಡುವವರೆಲ್ಲ ನಾಟ್ಯವಿಲಾಸಿಗಳೆನಿಸಿ, ಅಕ್ಷರಸ್ಥರೆಲ್ಲ ಲೇಖಕರೆನಿಸಿ ಮೆರೆಯುತ್ತಿರುವ ಈ ಕಾಲದಲ್ಲಿ ಎಲ್ಲ ವಿಷಯಗಳನ್ನು ಬಿಟ್ಟು ಕೂಸಿನ ವಿಷಯದಮೇಲೆ ಇದೆಲ್ಲಿಯ ಜಿಜ್ಞಾಸ ಎಂದು [illegible] ಅಪಹಾಸ್ಯಮಾಡಿದರು. ಸಂಜೆಯ ಹೊತ್ತು. ಜಡಿಮಳೆ 'ಇಳಿದು ಬಾ ತಾಯಿ ಇಳಿದು ಬಾ' ಎಂದು ಯಾವನೋ ಕವಿ ಗಂಗೆಯನ್ನು ಇಳೆಗಿಳಿಸಿರುವಂತೆ ಕಾಣುತ್ತಿತ್ತು. ಆ ಗಂಗೆಯು ಸೌಂದರ್ಯ ಗೋಪುರಗಳಲ್ಲಿ ಭರತನಾಟ್ಯವನ್ನು ಮುಗಿಸಿ ಪ್ಯಾರಿಸ್ ಹಾಲಿವುಡ್ ಕೇಂದ್ರಗಳ ನಗ್ನ ನರ್ತನಗಳಲ್ಲಿ ಲೀನವಾಗಿತ್ತು. ಒಬ್ಬರಾಡಿದ ಮಾತು ಇನ್ನೊಬ್ಬರಿಗೆ ಸರಿಯಾಗಿ ಕೇಳುತ್ತಿರಲಿಲ್ಲ. ಆದರೂ ಚರ್ಚೆ ಎದ್ದಿತೆಂದರೆ ನಮ್ಮಲ್ಲಿ ಬಿಸಿಯೇರದಿರುವುದುಂಟೇ?

ಕಲಕತ್ತದ ಉಪಚುನಾವಣೆಯಲ್ಲಿ ಶ್ರೀ ಶರಚ್ಚಂದ್ರರಿಗೆ ವಿಜಯ ದೊರೆತದ್ದರಿಂದ ಕಾಂಗ್ರೆಸ್ಸಿಗರಿಗೆ ಎಲ್ಲೆಲ್ಲೂ ವಿಹ್ವಲತೆಯುಂಟಾಗಿದೆ. ಎಲ್ಲ ವಿಷಯಗಳ ಸತ್ಯತೆ ಅಸತ್ಯತೆಗಳ, ನ್ಯಾಯತೆ ಅನ್ಯಾಯತೆಗಳ ನಿರ್ಣಯವಾಗುವುದು ಕಾಂಗ್ರೆಸ್ ಹುರಿಯಾಳಿಗೆ ಸೀಟು ಸಿಕ್ಕಿದ್ದರ ಮೇಲಿಂದ. ಇದೇ ಕಾಂಗ್ರೆಸ್ಸಿನ ಇಂದಿನ ಲೆಕ್ಕಾಚಾರ. ಕಾಂಗ್ರೆಸ್ ಉಮೇದುವಾರನಿಗೆ ಬಹುಮತ ಸಿಕ್ಕಿದರೆ ಎಲ್ಲ ನೆಟ್ಟಗಾದಂತೆ, ಇಲ್ಲದಿದ್ದರೆ ಎಲ್ಲ ಕೆಟ್ಟು ಹೋದಂತೆ. ಇದೇ ನಿಕಷ, ಒರೆಗಲ್ಲು--ಮಗುವಿನ ನಾಲಿಗೆಯಂತೆ

ತಿನ್ನಲಿಕ್ಕೆ ಬರುವ ಪದಾರ್ಥ ಮಾತ್ರ ಮಗುವಿನ ದೃಷ್ಟಿಯಲ್ಲಿ ಉಪಯುಕ್ತವಾಗುವುದು, ಪಕ್ಕದಲ್ಲ ಹಾಳು ಹಿಂದ ಒಬ್ಬಳು ಗರತಿಯಿದ್ದಳಂತ ನಮ್ಮ ಕಾಲಜ್ಞಾನದ ಬಸವರಾಜಯ್ಯನವರು ಅವಳ ನ್ಯಾಯವನ್ನು ಹೀಗ ಬಣ್ಣಿಸಿದರು

ಭಾಷ

ತನ್ನವರ ಕರಗೂಟರೇ ತಾ
ನನ್ನ ಮಾಡುವಳುಣ್ಣುಡಿಸುವಳ
ನ್ಯರಿಗೆ, ತನಗಿನ್ನು ಸೌಂದ್ಯವಿರಲ್ಕೆ ಮಿಕ್ಕವರ।
ಬನ್ನವನು ಲಕ್ಷಿಸಳು, ಆ ಈ
ಸಣ್ಣ ಕೆಲಸವ ಮಾಡುತಾಡುತ
ಕನ್ನ ಕಾಲವ ಕಳವಳಿಡಿದಿನ ಮಿಣ್ಣಾತನದಿಂದ ||೧||
ಭೋಜನೋಪಾಹಾರಗಳ ತ
ನ್ನೋಜೆಯಂತನುಕೂಲದಂತೆ ನಿ
ಯೋಜಿಸುವಳ ನಿಯಮಿತ ವೇಳೆಯೊಳಾಕೆ ತನ್ನಂತೆ।
ರಾಜಸುವುದೆಲ್ಲವರ ಬಸಿರೂ
ವ್ಯಾಜವಿರದಂಭೋದಿಯಂದದೊ
ಳೀಜಗದೊಳೆಂದರಿವಳಾ ಮೇದೋವಿಲಾಸವತಿ ||೨||
ತನ್ನ ಪಂಚೇಂದ್ರಿಯಗಳಿಗೆ ಬೇ
ಕೆನ್ನುವುದು ಬೇಕಾಗುವಾಗಲೆ
ಸನ್ನಿಹಿತ ವಿರಬೇಕು, ಮಿಕ್ಕ ಪರಾಗವುಣಬೇಕು
ಅನ್ಯವೇಳೆಯುಲಕ್ಷಣೀಯ, ಜ
ಘನ್ಯ ಮಿಕ್ಕದು ಜೀವಿಗಳಿಗೆಂ
ಬುನ್ನತಾಂಬಕಿಗಾದುದಿಷ್ಟವೆ ನಿಕಷವನವರತ ||೩||
ತನ್ನವೋಲಿನ್ನನ್ಯರೂ ಯೆಂ
ಬುನ್ನತಾದರ್ಶವನು ಸಾಧಿಸಿ
ಧನ್ಯಳಾದಳು ಗರತಿ, ತಾ ಕುಳಿತಿರಲು ಮಿಕ್ಕರಿಗೆ
ಸನ್ನಿಧಿಯೊಳೆ ವಿರಾಮ ನಿಂತರು

ಎನ್ನುವುದು ತಿಳಿವಳಿಕೆಯಾಕೆಯು
ಕಣ್ಣಿಗಾದುದೆ ಚೆಂದ, ಸರ್ವಾರಾಧ್ಯವವಳಂತೆ!

೬ ೬ ೬ ೬

ಪಾಕಿಸ್ತಾನಕ್ಕೂ ಅಫಗಾನಿಸ್ತಾನಕ್ಕೂ ಜಗಳಬಿದ್ದುಬಿಟ್ಟಿತಲ್ಲ! ಎಂದು ದನಿತೆಗೆದ ಇಂದಿನ ಪೇಪರ್ ನೋಡಿದ ಶಿವಶರಣಪ್ಪ, ಇಸ್ಲಾಮೇತರರಿಗೂ ಇಸ್ಲಾಮಿಗಳಿಗೂ ಜಗಳಬಿದ್ದಾಗ ಇಸ್ಲಾಂ ಅಪಾಯಕ್ಕೀಡಾಗಿದೆ ಎಂದು ಜಿನ್ನಾಸಾಹೇಬರು ಕೂಗುಹಾಕುತ್ತಿದ್ದರು ಈಗ ಏನಾಯಿತು? ಎಂದ ಶರಣಪ್ಪನ ಸವಾಲು ಹಂಗಸಿಗೂ ಗಂಡಸಿಗೂ ಜಗಳವಾದರೆ ನೋಡಿ ಪ ಹೆಂಗಸು ಹೆಣ್ಣುಪ್ರಕೃತಿಯಿಂದ ಗಂಡಸನ್ನು ಒಯ್ಯಾಳಿಸಿ ಜಯಪಡೆಯಲು ಪ್ರಯತ್ನಿಸುತ್ತಿದ್ದ ಕಾಲ ಹಿಂದಿನದು ಹೇಡಿತನವನ್ನೇ ಹೆಂಗಸು ಗೌರವವೆಂದು ಜಂಭಕೊಚ್ಚಿಕೊಳ್ಳುತ್ತಿದ್ದಂತೆ ಪಾಕಿಸ್ತಾನಿಗಳು ತದಿತರರನ್ನು ರಾಜಕೀಯ ಕೂಟಯುದ್ಧದಲ್ಲಿ ಗೆದ್ದರ ಗೆಲುವೆಂದೂ ಸೋತರ ಅದು ಇತರರ ದೌರಾತ್ಮ್ಯವೆಂದೂ ಪ್ರತಿಪಾದಿಸುತ್ತಿದ್ದ ಕಾಲವೀಗ ಸಂದು ಹೋಯಿತು ಹಟಮಾಡುವ ಮಗುವಿನ ಹಟ ಅತಿಯಾದಾಗ ಬೇಕಾದ್ದು ಮಾಡಿಕೋ ಎಂದು ಅದರ ಕೈಯಲ್ಲಿ ಚೂರಿಯನ್ನು ಕೊಟ್ಟಂತೆ ಪಾಕಿಸ್ತಾನಕ್ಕೀಗ ಸ್ವಾತಂತ್ರ್ಯವನ್ನು ಕೊಡಲಾಗಿದೆ ಕಾಶ್ಮೀರಪ್ರಕರಣದಲ್ಲಿ ಭಸ್ಮಾಸುರ ಲೀಲೆಯಿಂದ ಕಟ್ಟಿದವರ ಮೇಲೆಯೇ ಅಸ್ತ್ರವನ್ನು ಪ್ರಯೋಗಿಸುವ ಪ್ರಯತ್ನಮಾಡಿ ಡೊಣ್ಣೆ ಹಿಡಿದು ಹೊಡೆಯಲು ಬಂದ ದುರ್ಬಲ ಕಳ್ಳನಂತೆ ಶಸ್ತ್ರಾಸ್ತ್ರ ಕಳೆದುಕೊಂಡು ಮನೆಯನ್ನು ಹಿಡಿದ ಮತ್ತೊಂದು ಮಗುವಿನ ಪೇಚಿಗೆ ಕಾರಣವಾಗಿದೆ ಸಮಾನ ಧರ್ಮೀಯರು ದೂರಾದುದರಿಂದ ಧರ್ಮಯುದ್ಧಕ್ಕೇನೂ ಅಡ್ಡಿಯಿಲ್ಲವಲ್ಲ ದಕ್ಷಿಣ ಕನ್ನಡದಲ್ಲಿ 'ಕೋಳಿಪಡೆ' ಎಂಬ ಕೋಳಿಗಾಳಗ ನಡೆಸುತ್ತಾರೆ ಹುಂಜಗಳ ಕಾಲಿಗೆ ಚಿಕ್ಕ ಚಿಕ್ಕ ಚಂದ್ರಾಕಾರದ ಕತ್ತಿ ಕಟ್ಟಿ ಕೊಯ್ದಾಡಿಸುತ್ತಾರೆ ಕೋಳಿಗಾರರು ಸುಸಜ್ಜಿತ ಹುಂಜವನ್ನು ಹಿಡಿದುಕೊಂಡು ಕುಳಿತು ಒಂದರ ಮೇಲೊಂದನ್ನು ಬಿಟ್ಟಾಗ ಹುಂಜ ಪೂರ್ವ ಕಾಲದ ಕ್ಷತ್ರಿಯ ವೀರರಂತೆ ಕಾದಾಡಿ ಪ್ರಾಣಾರ್ಪಣಮಾಡುವವು ಅದರಿಂದ ರೈತರು ಆನಂದಪಡುತ್ತಾರೆ. ಈಗ

ಪಾಕಿಸ್ತಾನ ಅಫಗಾನಿಸಾನ್ಥಗಳಲ್ಲಿ ಇಂಥ ವಾಗ್ಯುದ್ಧ ಶುರುವಾಗಿದೆ,ದೇಖ್ ಮಿಯಾ ದೇಖ್--

ತಲ್ವಾರ ಲೇಕರ್ ಆಯ ಹೈ
ಮುರ್ಗೇ ಮಹಾಶಯ ರಂಗಕೋ
ದುಶ್ಮನಕ ಛಾತೀ ತೋಡಕರ್
ಶೈತಾನಕಾ ಖೂನ್ ದೇಯಗಾ
ಬಹದೂರಿಕಾ ಕಾಮ್ ದೇಖೊ ಯಾರ್
ರಣಮಸ್ತಖಾನ್‌ಕಾ ಮುರ್ಗಕಾ
ಉಪ್ಪರ ಚಢೇ ದುಶ್ಮನ್‌ಕ ಶಿರ್
ಕಾಟ್‌ಡಾಲ ಮಿಯ್ಯಾ ಬೇಶಲಾಕ್
ಅರೆ ಕ್ಯಾಹುವಾ ಮಹಮ್ಮದ್ ಖುರೇಶಕಾ
ಮಸ್ತಿ ಮುರ್ಗಾ ಉರ್‌ಗಯಾ
ಗರ್ದನ್ ಪಕಡಕೇ ಛೀನ್‌ಲಿಯಾ
ರೋತಾ ಹೈ ದೇಖೋ ಪೀರ್‌ಭಯಾ

❁ ❁ ❁ ❁

ಗಂಡಸರು ಹೆಚ್ಚಾಗಿ ಬಣ್ಣ ಬಣ್ಣದ ಬಟ್ಟೆಗಳನ್ನು ಹಾಕಿಕೊಂಡು ಚುಕ್ಕೆ ಚುಕ್ಕೆ ಚೂಪಕ್ಕನಂತೆ ತಿರುಗುವುದಿಲ್ಲ ಎಂಬುದು ತಿಳಿದಿದೆಯಷ್ಟೆ. ಇದಕ್ಕೆ ಅವರ ವರ್ಣದ್ವೇಷವೇ ಕಾರಣವೆಂದು ತಿಳಿದುಕೊಳ್ಳಬೇಕು ಇದನ್ನು ಯಾವ ರಾಜಕಾರಣಿಗಳೂ ಟೀಕಿಸುವುದಿಲ್ಲ. ಹೆಂಗಸೆಂದರೆ ವರ್ಣ ಪ್ರಿಯರು ಸರ್ವ ವರ್ಣಗಳನ್ನೂ ಅವರು ಸ್ವಾಗತಿಸುತ್ತಾರೆ ದಕ್ಷಿಣ ಆಫ್ರಿಕದ ಸರಕಾರವು ಶುದ್ಧ ಗಂಡು ಸರಕಾರವೆಂದು ತೋರುತ್ತದೆ. ಆದು ದರಿಂದಲೇ ಅಲ್ಲಿ ಬಿಳಿಯ ವರ್ಣಕ್ಕೆ ಪ್ರಾಶಸ್ತ್ಯ ಹಿಂದುಸ್ಥಾನದ ಸರಕಾರ- ಶುದ್ಧ ಹೆಣ್ಣಿನಂತೆ ಎಲ್ಲ ವರ್ಣದವರಿಗೂ ಆಶ್ರಯವಿತ್ತರೆ ದಕ್ಷಿಣ ಆಫ್ರಿಕ ಅಸ್ಟ್ರೇಲಿಯಗಳೇಕೆ ಹಾಗೆ ಮಾಡಿಯಾವು? ಹಿಂದೀಯರಿಗೆ ಈ ಗುಟ್ಟು ತಿಳಿಯದುದರಿಂದಲೇ ಸುಮ್ಮನೇ ಒದ್ದಾಡುತ್ತಾರೆ, ದೂರುತ್ತಾರೆ, ಗೊಣ ಗುಟ್ಟುತ್ತಾರೆ. ಯುರೋಪಿಯನ್ನರೇ ಆಗಬೇಕೆಂದಿಲ್ಲ, ಬಿಳಿಯವರಾದರೆ ಸೈ, ಅಲ್ಲಿ ಎಲ್ಲರೂ ಸ್ವಾಗತಿಸುತ್ತಾರಂತೆ ಅಂದಮೇಲೆ ಪಾವುಡರ್ ಸ್ನೋ

ಮುಂತಾದುವನ್ನು ಬಳಿದುಕೊಂಡ ಹುಡುಗಿಯರು ಹೇಗೆ ಸುಖವಾಗಿ ಸಮಾಜದಲ್ಲಿ ಪ್ರವೇಶವನ್ನು ದೊರಕಿಸಿಕೊಳ್ಳುತ್ತಾರೋ ಹಾಗೇ ದಕ್ಷಿಣ ಆಫ್ರಿಕದ ಶ್ವೇತಮಯೂರ ವೇಷದಿಂದ ಬಿಳಿಯರಲ್ಲ ಏಕೆ ಪ್ರವೇಶ ದೊರಕಿಸಿಕೊಳ್ಳಬಾರದು? ಎಂದು ಸರಕಾರಿ ಚೆನ್ನಪ್ಪನ ಸಲಹೆ ಕವಿಗಳಲ್ಲಿ ಹೊಗಳಿರುವುದು ಬಿಳಿಯ ಬಣ್ಣವನ್ನು, ಬಿಳಿಯ ವಸ್ತ್ರವನ್ನು ಶ್ವೇತವರ್ಣವು ಶ್ರೇಷ್ಠತೆಯ ಹಗ್ಗುರುತು, ಕೀರ್ತಿಯ ಗುರುತು, ಅದು ಅಮೃತ, ಅದು ಶುಭ ಆದುದರಿಂದ ಹಿಂದುಳಿದ ಹೆಂಗಸರು ಬಿಳೀ ಸೀರೆಯುಟ್ಟು ಶೃಂಗೇರಿ ಶಾರದೆಯರಾಗಿ ವಿದಗ್ಧ ಗೋಷ್ಠಿಯಲ್ಲಿ ಸಂಚರಿಸಲು ಶಕ್ಯವಾಗುವಂತ ದಕ್ಷಿಣ ಆಫ್ರಿಕದ ಹಿಂದೀಯರು ಶ್ವೇತವರ್ಣಲೇಪನ, ಶ್ವೇತವಸ್ತ್ರಧಾರಣ ಗಳಿಂದ ವರ್ಣದ್ವೇಷದ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದೆಂದು ಚೆನ್ನಪ್ಪನ ವಾದ ಅದಕ್ಕೆ ಅವನ ಕಾವ್ಯಾಧಾರ ಇಂತಿದ

ತಾವರೆಗಳೊಳಾ ಬಿಳಿಯ ತಾವರೆಯೆ। ಶ್ರೇಷ್ಠವೆಂಬರಣ್ಣಾ
ದೇವಗಂಗೆಯೂ ಧವಳೆಯಂತ ಮೈ। ತುಂಬ ಆದೇ ಬಣ್ಣಾ
ಗರಳಗೊರಳ ಮಾದೇವ ಬಿಳಿಯ, ಅವ। ಬಳಿದ ಭಸ್ಮ ಬಿಳಿದು
ಹೊತ್ತ ಚಂದ್ರನೂ ಬಿಳಿಯ ಮೋರೆಯವ। ಕಿರಣವೆಲ್ಲ; ಬಿಳಿದು
ದೇವಲೋಕದಾ ಪಾರಿಜಾತಕೂ। ಬಿಳಿಯ ಬಣ್ಣ ವಣ್ಣಾ
ಮನೆಯ ಸುಂದರಿಸ ಬಳಿವರೆಲ್ಲರೂ। ಶುದ್ಧ ಬಿಳಿಯ ಸುಣ್ಣಾ
ಚೊಕ್ಕ ಚಂದ ಮಡಿ ಬೆಳ್ಳಿ ಪಾತ್ರೆಗಳು। ಬಿಳಿಯುವಿರುವವಲ್ಲ
ರತ್ನಗಳಲ್ಲೀ ಶ್ರೇಷ್ಠ ವಜ್ರ ತಾ। ಬಿಳಿಯದಾಯಿತಲ್ಲ
ಆದಿದೇವ ನಾರಾಯಣ ಶುಕ್ಲಾಂ। ಬರವ ಧರಿಸಿ ನಿಂದ
ಎಲ್ಲ ಬಣ್ಣ ಬಿಳಿಯುದರಲ್ಲಿದೆ ವಿಜ್ಞಾನಿ ರಾಜನೆಂದ
ನಗೆ, ಮಲ್ಲಿಗೆ, ಬಗೆಗೊಳಿಸುವ ಬಟ್ಟೆಯ। ಹತ್ತಿ, ಹಾಲು, ಗಿಳಿಯು
ಬಿಳಿದು ಬಿಳಿದು ಬಾನ್ ಬಯಲುಗಳೆಲ್ಲಾ। ಹೆಬ್ಬೆಳಕಿನ ಸುಳಿಯು।

೮ ೬ ೮ ೬

ಹೊಸ ಸರಕಾರಗಳಿಗೆ ಕರ ಹೇರುವ ಒಂದು ರೋಗವೇ ತಗುಲಿ ಬಿಟ್ಟಿದೆ ಮುಂಬಯಿ ಮದ್ರಾಸು ಸರಕಾರಗಳು ಅವುಗಳಲ್ಲಿ ಅಗ್ರಗಣ್ಯ ಎನಿಸಿವೆ ಮಾರಾಟವಾದ ಮೇಲೆ ಜಾಹೀರಾತು ಕರವನ್ನೀಗ ಜಾರಿಯಲ್ಲಿ

ತರುತ್ತಿವೆ ಎಂದು ಶಿವಗಂಗವ್ವ ಶ್ರೀನುಡಸಿಯಿಂದ ಹೇಳತೊಡಗಿದ್ದನ್ನು ಕೇಳಿ ಕೆರಳಿದ ಗಾಂಧೀ ಟೋಪಿಯ ಗುರುವಣ್ಣ ಗೌಡನು-ದುಡ್ಡಿಲ್ಲದೆ ಸರಕಾರ ನಡೆಯುವುದು ಹೇಗೆ-ಎಂದು ಗುಡುಗಿ ಬಿಟ್ಟನು ದೇಶೋದ್ಧಾರ ಮಾಡುವ ಮಂದಿ ವ್ಯಾಪಾರಿಗಳ ಮೇಲೆ ಕರಹಾಕುತ್ತೇವೆ ಎಂದು ಅಸಂಖ್ಯ ಬಡಗರಾಶಿಗಳನ್ನು ಸುಲಿಯುತ್ತಿರುವುದು ಸರಕಾರ ನಡೆಸುವ ಕ್ರಮ ಏನೆಂದು ಗಂಗವ್ವ ಗಡುಸಾಗಿ ಕೇಳಿಯೇ ಬಿಟ್ಟಳು ಕಕ್ಕಾಬಿಕ್ಕಿಯಾದ ಗುರು ವಣ್ಣ ಬೆಕ್ಕು ಬಕ್ಕಳಿಸತೊಡಗಿದಂತೆ ' ನಮ್ಮ ಸರಕಾರಕ್ಕೆ ಹಾಗೆ ಹೀಗೆ ಟೀಕೆ ಮಾಡಬಾರದು' ಎಂದು ಪಟಗುಟ್ಟಿದನು ಆ ಪಕ್ಷ ಈ ಪಕ್ಷ ಹಿಡಿದು ಒಬ್ಬರ ಮೇಲೊಬ್ಬರು ವಾದಿಸತೊಡಗಿದರು ದುಡ್ಡಿಲ್ಲದ ಸರ ಕಾರ ನಡಯುದು, ಬಡವರಿಂದಲ್ಲದೆ ಇತರರಿಂದ ದುಡ್ಡು ವಸೂಲುಮಾಡಲು ಸಾಧ್ಯವಾಗದು ಎಂಬುದೇ ವಾದದ ಸಾರಾಂಶ ಇದಕ್ಕೆ ನಿರ್ಣಯ ಕೊಡ ಬೇಕಾಯಿತಲ್ಲವೆ? ಆ ಕೆಲಸವನ್ನು ಕೀರ್ತನಕಾರರಿ ಕಂಬಸಸ್ತ್ರ ಶಾಸ್ತ್ರಿ ಗಳೇ ಮಾಡಿಬಿಟ್ಟರು

ಭಾ ಷ
ಮುನಿಗಳನು ಸುಲಿಯುವುದು ರಾಕ್ಷಸ
ಜನಪತಿಗೆ ತಾ ಶೌರ್ಯವಾಯ್ತಾ
ದಿನಪ ತೇಜದ ವೀರರನು ಗೆಲಲಾರದಾಗಿರಲು,
ಘನ ಪರಾಕ್ರಮವಾಯ್ತು ಕೇಳಾ
ವನನೃಪಾಲಗೆ ನೊಲವಹಿಡಿವುದು
ತನುವು ಮುಪ್ಪಾಗಿರಲು ಶಿಥಿಲೇಂದ್ರಿಯತಬೂದಗಿರಲು!
ಪಾಪಿಗಳ ಶಿಕ್ಷಿಸಲು ಬಾರದ
ಭೂಪತಿಗಳಿಗೆ ಪಾಪ ಭೀರುಗ
ಳಾಪದವ ಹೆಚ್ಚಿಸುವುದೊಂದೇ ರಾಜನೀತಿಯಲ,
ಶ್ರೀಪತಿಗಳಿಗೆ ಬೆದರಿ ಬಾಳುವ
ಕೂಪಕೂರ್ಮದಹಿಂಸ ಸತ್ಯದ
ಲೇಪಕರ್ಣಾಪೇಯ ಸಂದೇಶಿದನು ಶಿವ ಗಿರಿಯ'

* * * *

'ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ' ಎಂದು ಕವಿಗಳೊಬ್ಬರು ಹೇಳಿದ ಮಾತನ್ನು ಸಿದ್ಧಾಶ್ರಮದ ಚರ್ಚಾಕೂಟದಲ್ಲಿ ಚರ್ಚೆಗೆ ತೆಗೆದು ಕೊಳ್ಳಲಾಯಿತು ವಾದಿಯು ವಸ್ತುಮಂಡನ ಮಾಡುವಲ್ಲಿ ಸೌಂದರ್ಯವು ದಿವ್ಯವೆಂದೂ ಚಕ್ಷುರಾದಿ ಇಂದ್ರಿಯಗಳಿಂದ ಅಗ್ರಾಹ್ಯವೆಂದೂ ಸಾಧಿಸಿದನು ಪ್ರತಿವಾದಿಯು 'ಚಕ್ಷುರ್ಮಾತ್ರ ಗ್ರಾಹ್ಯೋ ಗುಣೋ ರೂಪಂ' ಎಂದು ರೂಪವಿಲ್ಲದಲ್ಲಿ ಸೌಂದರ್ಯವಿಲ್ಲ, ರೂಪ ಕಣ್ಣಿಂದಲ್ಲದೆ ಮತ್ತಾವುದರಿಂದ ಗ್ರಾಹ್ಯ? ಎಂದು ಸವಾಲು ಹಾಕಿದ ಇವರಾದಮೇಲೆ ಮಾತಾಡಿದ ವಾಗ್ಮಿಗಳು ಸೌಂದರ್ಯವೆಂದರೆ ಸತ್ಯ ಎಂದೂ ಸತ್ಯ ಮನೋಗೋಚರ ವೆಂದೂ ಹೇಳಿದರೆ ಮತ್ತೊಬ್ಬರು 'ಭಿನ್ನ ರುಚಿರ್ಹಿಲೋಕಃ' ಎಂಬ ಆಧಾರದ ಮೇಲೆ ಎಲ್ಲರಿಗೂ ಸುಂದರವೆನಿಸಬಹುದಾದ ಒಂದು ಸೌಂದರ್ಯಪ್ರತೀತಿ ಇಲ್ಲವೇ ಇಲ್ಲ ಆದುದರಿಂದ ಅವರವರು ಕಂಡದ್ದು ಸುಂದರ ಎಂದರು ಮಧ್ಯಸ್ಥಿಕೆಗೆ ಕುಳಿತ ವೀರಭದ್ರ ಪುರಾಣಿಕರು, "ಹಾಗೂ ಅಲ್ಲ ಹೀಗೂ ಅಲ್ಲ ಅದೇ ಕವಿ ಇನ್ನೊಂದೆಡೆ ಹೇಳಿದಂತೆ 'ಕಂಡವರಿಗಲ್ಲ ಕಂಡವರಿಗಷ್ಟೆ ತಿಳಿದsದ ಅವರ ನೆಲೆಯು' ಅಂದರೆ ಸೌಂದರ್ಯ ಕಣ್ಣಿಗೇನೋ ಗೋಚರ ವಾಗುವುದು, ಆದರೆ ಎಲ್ಲರ ಕಣ್ಣಿಗೂ ಅಲ, ಸೂಕ್ಷ್ಮಗ್ರಹಣ ಶಕ್ತಿಯುಳ್ಳ ಪರೇಂಗಿತಜ್ಞರ ಕಣ್ಣಿಗೆ ಮಾತ್ರ' ಎಂದು ತೀರ್ಮಾನಿಸಿಬಿಟ್ಟರು ಅಷ್ಟು ಹೊತ್ತಿಗೆ ಬೀದಿಯ ಭಿಕ್ಷುಕಿಯೊಬ್ಬಳು ಸ್ವರೂಪತಃ ಸ್ವಲ್ಪ ಸುಂದರಿ ಯಿದ್ದಳು, ಆದರೆ ಅವಳು ಈ ಕೆಳಗಿನ ಹಾಡನ್ನು ಹೇಳುತ್ತಿದ್ದಳು. ದೊಡ್ಡ ದನಿಯಿಂದ ಹಾರ್ಮೋನಿಯಂ ಮೇಳದೊಡನೆ ಅದು ಸುಂದರವಲ್ಲ ಸುಂದರವಿದ್ದರೂ ಎನ್ನಿಸಿತು ನನಗೆ. ಹೌದಂತೀರೋ ಅಲ್ಲಾಅಂತೀರೋ?

ಮಲ್ನಾಡ್ ಸೀಮಿಾ ದುರ್ಗೀ ನಾನು
ಎಲ್ಲಾ ಊರಾ ತಿರ್ಗೀ ಬಂದೆ
ಎಲ್ಲೂ ಯಾರ್‍ಲ್ಲ, ನನಗೆ ಸಂಗಾಂ ಜೋಡಿ ||
ಚಂದಾ ಚಂದಾವೆಲ್ಲ ಕೂಡಿ
ಒಂದು ರೂಪವನ್ನು ಮಾಡಿ
ಏನು ಸುಂದರೀ ನಾನಿನ್ನೆಂಥ ಸುಂದರಿ ||
ರಾಗೀ ಜೋಳದ ಯಾಪಾರಮಾಡಿ

ಬೂದೀನಾಮ ಹಚ್ಚೀಕೊಂಡು
ಸಾಧೂವಾಗಿ ತಿರುಗೂತೇನೆ ಬೀದಿ ಸುಂದರಿ ನಾನು ||
ಚಿನ್ನ ಬೆಳ್ಳೀ ವಿಸ್ಕ್ರೀ ಪಾನೂ
ಒಳ್ಳೇ ನಾಣ್ಯದ ಯಾಪಾರಮಾಡಿ
ಎಲ್ಲೂ ಯಾರಿಲ್ಲ ನಂಗೆ ಸಂಗಾಂ ಜೋಡಿ ||

❀ ❀ ❀ ❀

‘ನಮ್ಮ ಸಿದ್ಧಪ್ಪಣ್ಣ ಬಹಳ ಒಳ್ಳೆಯವರು’ ಅಂತಾರೆ ಗೆಳೆಯ ಪರಮಹಂಸ ಅಲ್ಲಮಯ್ಯನವರು ಅದೇಕೋ ನಾ ಬೇರೆ ಕಾಣೆ ಯಾರಿಗೂ ಏನನ್ನೂ ಮಾಡದಿರುವುದು ಒಳ್ಳೆಯತನವೇನು? ಹಾಗಾದರೆ ಹೇಡಿಗಳೂ ಅಂಜುಬುರುಕರೂ ಎಲ್ಲರಿಗಿಂತ ಒಳ್ಳೆಯವರಾದಾರು ಆದರೆ ಅಲ್ಲಮಯ್ಯ ಈ ಅರ್ಥವಿಟ್ಟು ನನ್ನನ್ನು ಹಾಸ್ಯಮಾಡಿರಬಹುದೇ? ಲೋಕದಲ್ಲಿ ಇಂಥ ಒಳ್ಳೆಯತನಕ್ಕೆ ಬೆಲೆಯಿಲ್ಲವೆಂದಲ್ಲ ಅಷ್ಟಕ್ಕಷ್ಟೇ ಒಳ್ಳೆಯದು ಕೇಡಿಯಾದರೆ ಹಿಂಸಾವಲಂಬಿಯಾದರೆ ಮತ್ತೂ ಕೆಟ್ಟದ್ದು ಅಂತಾರೆ ಆದರೆ ಸ್ವಲ್ಪವಾಗಲಿ ಹೆಚ್ಚಾಗಲಿ—ನಿಷೇಧಾತ್ಮಕವಾದುದು ಎಷ್ಟಾದರೂ ನಿಷಿದ್ಧವೇ ಅಲ್ಲವೇ? ಕೇಡಿಗೆ ಒಂದು ಶಕ್ತಿಯಿದೆ, ಕಾರ್ಯಮಾಡುವ ಉತ್ಸಾಹವಿದೆ ಮನಸ್ಸು ಮಾಡಿದರೆ ಅವನು ಒಳ್ಳೆಯದನ್ನು ಮಾಡಬಲ್ಲ. ಆದರೆ ನಿಷೇಧಾತ್ಮಕ ವ್ಯಕ್ತಿಗಳಿಗೆ ಮನಸ್ಸು ಮಾಡುವುದೆಂಬುದೇ ಇಲ್ಲ. ಎಲ್ಲವುದರಿಂದಲೂ ದೂರ—ಅಲಕ್ ನಿರಂಜನ್! ಸಮಾಜದಲ್ಲಿ ಇಂಥ ನಿಷ್ಕ್ರಿಯರಿಗೆ ಸ್ಥಾನವುಂಟೆ? ಗೀತೆಯ ಕರ್ಮಯೋಗ ಮನಸ್ಸಿನಿಂದಾಗಲಿ, ಬಾಯಿಯಿಂದಾಗಲಿ, ಕಾರ್ಯದಿಂದಾಗಲಿ ಕರ್ತವ್ಯಮಾಡುವುದನ್ನು ಒತ್ತಿ ಹೇಳುತ್ತಿರುವಾಗ ಈ ಮೂರರಿಂದ ಏನನ್ನೂ ಮಾಡದವಂಗೆ ಮನಸ್ಸಿದೆ ಎನ್ನಲು, ಅವರು ಮನುಷ್ಯರೆನ್ನಲು ಬಂದೀತೆ? ಮನಸ್ಸಿದ್ದವರ ಮನಸ್ಸು ಮಾತು, ಅಂಗವಿನ್ಯಾಸ ಮತ್ತು ಕಾರ್ಯಗಳ ಮೂಲಕ ತಿಳಿಯುವುದಲ್ಲದೆ ಮತ್ತಾವುದರಿಂದಲೂ ತಿಳಿಯದು ಎಂಬ ವಿಚಾರವನ್ನು ಕಾಪಾಲಿ ಶಾಸ್ತ್ರಿಗಳ ಮುಂದೆ ಹೇಳಿದೊಡನೆಯೇ ಅವರು ಚೆನ್ನಾಗಿ ನಕ್ಕು ತಮ್ಮದೇ ಆದ ಪ್ರಗತಿಶೀಲ ಶೈಲಿಯಲ್ಲಿ ರಾಗ ಎತ್ತಿಬಿಟ್ಟರು—

ಕಲೆ ಕಲೆಯ ಮುಚ್ಚಿಕೊಳ್ಳುವುದರಲ್ಲಿದೆ ರಸಿಕ,
ಮುಚ್ಚಿಕೊಂಡೇ ಬಿಚ್ಚಿದಂತೆ ತೋರಿಸಬೇಕು,
ಸುಳ್ಳಿಗಿಂತಲು ಸುಂದರದ ವಸ್ತುವುಂಟೇನು?
ಅದೆ ಕಾವ್ಯ, ಚಿತ್ರಕಲೆ, ಮೂರ್ತಿಶಿಲ್ಪ ಕಣಯ್ಯ,
ಮಾತುಕತೆ ನಡೆನುಡಿಗಳೊಂದುತೆರನಿರಬೇಕು,
ಮನಮಾತ್ರ ಪ್ರತ್ಯೇಕ, ಪ್ರತ್ಯೇಕ, ಪ್ರತ್ಯೇಕ!
ಇದುವೆ ನೋಡಾಕರ್ಷಣದ ಸೂತ್ರ ಕೃಷ್ಣಾಸ್ತ್ರ
ತಾನೆಂದುದೇ ಸತ್ಯ ಸತ್ಯವೆಂದೊದರಿದರೆ
ಸೌಂದರ್ಯ ಕಮನೀಯ ಗಾತ್ರದಿಂದಪ್ಪುವದು!
ಅದಕಿಂತ ಒಳ್ಳಿತೆಲ್ಲಿಂದ ಬಂದೀತಿನ್ನು?
ಅದು ! ಲೋಕದಾನಂದ, ಚಂದ, ಚಂದ್ರಾಕಾರ!
ಆ ಚಂದವೊಂದನಳವಡಿಸಿಕೊಂಡರೆ ಸಾಕು,
ಸುಮ್ಮನಿದ್ದರು ಸುಭಗ, ಸುಂದರ, ಸುಮಾಕಾರ—
ಸರ್ವಹಿತಕರ, ವಶೀಕರಣ ನರ್ತನಸಾರ,
ಸರ್ವಪ್ರಯೋಜನ, ಸುಸಮ್ಮೋಹನ ವಿಚಾರ!
ಇದನಂತ, ಸತ್ಯ, ಸುಂದರ, ಸತ್‌ಸದಾನಂದ,
ಇದಪಾರ ಮಹಿಮೆ, ಕಲೆ, ಕರ್ಮಯೋಗದ ಛಂದ !
ಸುಳ್ಳನ್ನು ಸುಳ್ಳೆಂಬ ಮರುಳನನು ಮಾನಿಸರು
ಮಾನಿಸರು ಸತ್ಯವನು ಸುಳ್ಳೆಂಬರೇ ನಿಜರು!
ನಿಜದ ನಿಜವಿದು ಮರುಳು ಸಿದ್ಧೇಶ್ವರಾ ನಿನ್ನ
ಮರುಳು ಸುಂದರವೆಂದರಂದು ನೀನೊಳ್ಳೆಯವ!

❁ ❁ ❁ ❁

ಸಂಯುಕ್ತ ರಾಷ್ಟ್ರ ಸಂಘದ ವಿಶ್ವಸ್ತ ಮಂಡಲಕ್ಕೆ ಕಪ್ಪು ಸದಸ್ಯರನ್ನು ಅಂದರೆ ಶ್ವೇತೇತರರನ್ನು ಸೇರಿಸಿಕೊಳ್ಳಬಾರದೆಂದು ಬಿಳಿಯರು ತೀರ್ಮಾನಿಸಿದ್ದಾರೆ ಅಮೇರಿಕ ಮತ್ತು ಯುರೋಪಿನವರಲ್ಲದೆ ಅನ್ಯರಾರೂ ಬಿಳಿಯರಲ್ಲ, ಸುಂದರರಲ್ಲ, ಶ್ರೇಷ್ಠರಲ್ಲ ಎಂದು ಇಂದಿನ ನಾಗರಿಕತೆ ಹೇಳುತ್ತದೆ. ಇದು ಬಿಳಿಯ ನಾಗರಿಕತೆ ಇಲ್ಲಿ ಬೆಳ್ಳಗಿರುವುದಷ್ಟೇ ಹಾಲು.

ದುಂಡಿರುವುದಷ್ಟೇ ಚೆಂದ, ಗೋಲಾಕಾರವಾಗಿರುವುದಷ್ಟೇ ಸತ್ಯ ಸಿಗರೇಟಿನ ಹೊಗೆಯೊಂದೇ ಆನಂದ, ಧೂಮಪಾನವು ಕಲಾವಿನ್ಯಾಸ, ಕಲಿಸುವವರು ಗುರುಗಳು, ಕಲಿತುಕೊಳ್ಳುವವರು ಶಿಷ್ಯರು, ನಾವು ಕಲಿತುಕೊಂಡದ್ದು ಅವರಿಂದ   ಆದುದರಿಂದ ಅವರೊಡನೆ ನಮಗೆಲ್ಲಿಯ ಸಮಾನಾಧಿಕಾರ? ನಮ್ಮಲ್ಲಿ ಗಂಡನು ಹೆಂಡತಿಯನ್ನು ಮದುವೆಯಾಗುವನಲ್ಲವೆ ಹೆಂಡತಿ ಗಂಡನನ್ನೆಂದಾದರೂ ಮದುವೆಯಾಗುವುದುಂಟೇ? ಗಂಡನಿಗಾಗಿ ಹೆಂಡತಿಯಲ್ಲದೆ ಹೆಂಡತಿಗಾಗಿ ಗಂಡನಿರುವುದಿಲ್ಲ ಎಂದು ಗಂಡ ಹೆಂಡಿರಿಬ್ಬರೂ ನಂಬಿರುವಾಗ ಹೆಂಡತಿಗೆಲ್ಲಿಯ ಸಮಾನಾಧಿಕಾರ? ನಾವು ಹೆಂಡತಿ ಅವರು ಗಂಡ ಎಂತ ಅವರಷ್ಟೇ ತಿಳಿದುಕೊಂಡಿದ್ದರೆ ಆ ಮಾತು ಬೇರೆ   ನಾವೂ ಹಾಗೇ ತಿಳಿದುಕೊಂಡಿರುವೆವಲ್ಲ ಇದಕ್ಕೇನು ಹೇಳುತ್ತೀರಿ? ನಮಗೆ ಹೆಂಡತಿಗೆ ದೇಹಬಲ ನ್ಯಾಯವಾಗಿ ಕಡಿಮೆಯಿರುವಂತೆ ಶಸ್ತ್ರಬಲ ನ್ಯಾಯವಾಗಿ, ಕಡಿಮೆಯಿದೆ ಆದರೆ ಸದ್ಬುದ್ಧಿಬಲ ಹೇಗೆ ಸಮಾನಾಧಿಕಾರಕ್ಕೆ ಅವಶ್ಯಕವೊ ಹಾಗೇ ರಾಜತಂತ್ರಜ್ಞತೆ ಇಲ್ಲ ನಮ್ಮ ಸಮಾನಾಧಿಕಾರಕ್ಕೆ   ಅವಶ್ಯಕ ಏಶಿಯನ್ ಪರಿಷತ್ತಿನ ಸದಸ್ಯ ರಾಷ್ಟ್ರಗಳಿಗೆ ಇನ್ನೂ ಆಂಗ್ಲೋ-ಅಮೇರಿಕನ್ನರ ಬಾಲ ಒಡಿಯುವ ಬುದ್ಧಿ ಹೋಗಿಲ್ಲ   ಅದು ಹೋಗುವ ವರೆಗೆ ಇವರಲ್ಲಿ ಬಿಳಿಯರಿಗಿಂತ ಬಿಳಿಯರಿದ್ದರೂ ಅವರು ಕಪ್ಪೆಂದರೆ ಒಪ್ಪಿಕೊಳ್ಳಬೇಕು. ಕಪ್ಪಿನೊಳಗೆ ಈ "ಬಿಳಿಯ ಬುದ್ಧಿ" ಹುಟ್ಟಿದ ಹೊರತು ಈ ಅವಮಾನಕ್ಕೆ ಪ್ರತೀಕಾರ ಮಾಡಲಾಗಲ್ಲ ಬಿಳಿಯದು ಚೆನ್ನವಾದರೆ ಕಪ್ಪನ್ನು ಬಿಳಿಯದೆನ್ನಬಾರದೇಕೆ ನಮ್ಮ ಜನ? ಅದಾದರೂ ಅಂದು ಅಂದು ಚೆನ್ನಾಗಿರುವಾಗ, ಶ್ರೇಷ್ಠವಾಗಿರುವಾಗ, ಇದನ್ನಾದರೂ ಅಂದು ಅಂದೇ ಬೆಳ್ಳಗೆ ಮಾಡಬಹುದಲ್ಲವೇ? ಇದೇ ಗುಟ್ಟು ಕೌಟಲ್ಯ ಶಾಸ್ತ್ರದಲ್ಲಿ ಉಕ್ತವಾಗಿದೆ—

'ಕಲಾ'ಕಾಲ ಪ್ರಯಾಣೇನ
'ಕಾಲೋ'ಭವತಿ ಧೀಮತಾಂ ।
ಕಾಲಧರ್ಮಾನುಸಾರೇಣ
ಶ್ವೇತಾಶ್ವೇತ ವಿಪರ್ಯಯಃ ।
ವರ್ಣವೇ ಗುಣವಾದಾಗ
ಬಿಳಿದಕ್ಕು ಸುವರ್ಣವು ।

ಗುಣವೇ ವರ್ಣವೆಂದಾಗ
ಕಪ್ಪೇ ಸ್ವರ್ಣಪ್ರಭಾನ್ವಿತ।
ವಾಕ್ಯವರ್ಮದಿಂದ ನಾವೆಲ್ಲ
ಒಂದಾದಾಗ ವರಿಷ್ಠರು।
ನಾವೇ, ನಮ್ಮದೇ ಶ್ವೇತ,
ಬ್ರಹ್ಮನೇ ಬೈಬಲೇಶರ ॥
ಕೃಷ್ಣನೇ ಕ್ರಿಸ್ತನಾದಾನು
ಗಾಂಧಿಗಣ್ಣಿನಿಂದ ನೋಡಲು।
ಕಪ್ಪಾದರೂ ಕಣ್ಣು ಚೆಂದ
ಕನ್ನಡರ್ ಕಣ್ಣಿಗರ್ ಕಣಾ ॥
ಶ್ಯಾಮ ಸುಂದರಿಯಂ ಕಂಡಾ
ಪಂಪಾದಿ ಕವಿಪುಂಗವರ್।
ಮಹೋಲ್ಲಾಸ ವಿಲಾಸೇನ
ಮಹಾಕಾವ್ಯವ ಗೀಚಿದರ್ ॥
'ತನ್ವೀ ಶ್ಯಾಮಾ' ಯುಕ್ತಿಯಿಂದ
ಕಾಲೀದಾಸ ಕವೀಶ್ವರ।
ನೀಲೋತ್ಪಲದಲ ಶ್ಯಾಮೆ
ತಾನೆಂದಳ್ ವಿಜಯಾಂಬಿಕೆ ॥
ನಿಷ್ಪ್ರಭಶ್ವೇತರಂ ಕಂಡು
ಬಿಳಿಹಲ್ ಬಿಡಬಾರದು।
ಕಟೋಕ್ತಿ ಕಲೆಯಂ ಬಲ್ಲ
ಕೌಟಿಲ್ಯಮತವಿಂತಿದೆ।

❀ ❀ ❀ ❀

ನಮ್ಮ ಬಯಲುಸೀಮೆಗೀವರ್ಷ ಇಂದ್ರಕೃಪೆ ಚೆನ್ನಾಗಿ ಲಭಿಸಿದಂತೆ ತೋರುತ್ತದೆ ಪ್ರತಿ ಸಾಯಂಕಾಲ ಮೂರು ಗಂಟೆಗೆ ಉಧೋ ಎಂದು ಮಳೆ ಸುರಿಯಲಾರಂಭಿರುತ್ತದೆ. ಹಾದಿಹೋಕರಿಗೆ ಕೆನ್ನೀರ ಜಳಕ ಮನೆಯಲ್ಲಿ ಕುಳಿತ ಅಜ್ಜ ವೊಮ್ಮಕ್ಕಳಿಗೆ ಮುಸುಕಿನ ಜೋಳ ಸುಟ್ಟುಕೊಂಡು

ತಿನ್ನುವ ಛಂದ? ಅಕ್ಕಿ ತಿಂದವ ಹಕ್ಕಿಯಾಗ್ತಾನೆ, ಜೋಳ ತಿಂದವ ತೋಳನಾಗ್ತಾನೆ ಎಂಬುದು ನಮ್ಮ ಗಾದೆ. ಜನರಲ್ ಮೆಕಾರ್ಥರರು ಜೋಳ ತಿನ್ನದೆಯೇ ತೋಳನಾದದ್ದು ಹೇಗೆ? ಎಂಬುದು ನಮ್ಮ ಸಿದ್ದಪ್ಪನ ಬಿಡಿಸಲಾರದ ಸಮಸ್ಯೆ. ಏಶಿಯಾ ಖಂಡವನ್ನೇ ನುಂಗುವೆನೆಂಬ ಆ ಪ್ರಾಣಿಯ ಗಂಟಲು ಎಷ್ಟು ದೊಡ್ಡದಿರಬಹುದು? ಎಂದು ಮಕ್ಕಳಿಗೆಲ್ಲ ಕೂತುಹಲ.

ತೀಗುವಿನ ಹತ್ತಿರ ಭೀಕರ ಯುದ್ಧ ನಡೆಯುತ್ತಿದೆಯೆಂದೂ ಸಂರಾ ಸಂಘದ ಸೈನ್ಯಕ್ಕೆ ಗಂಡಾಂತರ ಬಂದಿದೆಯೆಂದೂ ಓದಿದ ಲಿಂಗವ್ವಕ್ಕ ಕೇಳುತ್ತಾಳೆ. ಹೆಣ್ಣು ಮಕ್ಕಳು ಬೇರೆ ಗಂಡನ್ನ (ಒಬ್ಬನಿಗೆ ಸೋಡಚೀಟಿ ಕೊಟ್ಟು) ಮಾಡಿಕೊಂಬೋದದ, ದಂಡೆಲ್ಲಾದರೂ ಗಂಡಾಂತರ ಮಾಡಿಕೊಂಬೋದೈತೇ?—ಎಂದು 'ಹೌದು ಯಾಕಾಗಬಾರದು' ಅಂದ ನಮ್ಮ ಸಿದ್ಧಲಿಂಗಪ್ಪ 'ಒಬ್ಬ ಸೇನಾಪತಿ ತೀರಿಕೊಂಡ ಅಂದರೆ ಮತ್ತೊಬ್ಬನ್ನ ನೇಮಿಸಿಕೊಂಬೋದಿಲ್ಲೇನು? ಅದೂ ಗಂಡಾಂತರಾನೇ!' 'ಎಲೇ ಇವನ, ಗಂಡಾಂತರ ಅಂದರ ಕಠಿನ ಪರಿಸ್ಥಿತಿ ಅಂಬೋ ಅರ್ಥವೇನೋ' ಅಂತ ಶ್ಯಾಮಚಂದ್ರಬಾಬು ಪ್ರಶ್ನೆ ಹಾಕಿದ್ರು. 'ಅದೇ ಹೇಳಿದ್ನಾನೂ. ಗಂಡ ಹ್ಯಾದರ ಪರಿಸ್ಥಿತಿ ಕಠಿನಾಗೋದಿಲ್ಲೇನು ಹೆಣ್ಣುಮಕ್ಕಳಿಗೆ?' ಸಿದ್ಧಲಿಂಗ ದನಿ ಎತ್ತರಿಸಿದ. 'ಈಗಿನ ಕಾಲದ ಹೆಣ್ಣುಮಕ್ಕಳು ಗಂಡ ಹ್ಯಾದರ ಒಂದು ಪೀಡೆ ಹೋತು ಅಂತಾರ' ಅಂದಳು ಲಿಂಗವ್ವಕ್ಕ. 'ಮನ್ನೆ ಒಂದು ಕನ್ನಡ ನಾಟಕ ಹಿಂಗೇ ಆತು ನೋಡವ್ವಾ. ನಾಟಕದ ಪಾತರದಾಕಿ ಗಂಡನ್ನ ಕುಂಡರ್ಸಿಕೊಂಡು ಏನ್ಹೇಳ್ತಾಳಂತೀರಿ—ಅಂತ ಸಿದ್ಧಲಿಂಗ ಸುರು ಹಚ್ಚಿದ.

ಏಕಲ್ಯಾ, ನಾನು ಹಿಂದಿನಾಂಗೇ ಅಲ್ಲ ನೋಡು
    ಹೊಸ ದಿರುಸಿನಾಕಿ,
ನನಗ್ ಸರೀ ಆಗಿ ಸೀ ದಿರಸೂ ಹಾಕಿಕೊಂಡು
    ಬರಲೇಬೇಕು ಜ್ವಾಕಿ!
ಕಸ ಮುಸರೀಗಿಸರಿ ಮಾಡೊವಾಕಿ ಅಲ್ಲ
    ನಾನು ಮ್ಯಾಡಂ ಅಂತ ತಿಳಕೋ,
ಕೈಯಲ್ಲಿ ಕೈಯ ಹಾಕಿ ತಿರಗಸ್‌ಬೇಕು, ನನ್ನ
    ಸೇವಾ ಮಾಡಿ ಉಳಕೋ!

ರೊಕ್ಕ ಪಕ್ಕ ನೀ ದುಡ್ದದ್ದೆಲ್ಲಾನೂ
ಉಡೀಲ್ಲಾಕಬೇಕು,
ನಾ ಕೊಟ್ರೇ ಐತಿ ನಿನಗಿಲ್ಲದ್ರಿಲ್ಲ ನೋಡು
ಎಚ್ಚಾರ್ರ ಇಟ್ಕೋಬೇಕು !
ನೀ ಹಾಂಗs ಹೀಂಗ ಮತ್ತಂದೀಗಿಂದಿಜಂದ್ರ
ಕೊಟ್ಟೇನ್ ನೋಡ ಚೀಟಿ !
ನಾ ಕುಂತುಣ್ಣಾಕಿ, ನೀ ದುಡ್ಯೋ ಮನ್‌ಶ್ಯ
ನಿನಗಿಷ್ಟೇ ಚೂರು ರೊಟ್ಟಿ !
ಇದ್‌ಕೇನಾದ್ರೂ ನೀ ತೆಪ್ಪೀದ್ಯಂದ್ರ ಗಂ-
ಡಾಂತ್ರ ಖಾತ್ರಿ ನಿನಗ,
ಸಟ್ಟೇ ಇಳ್ದ ಕಡೆ ಪಟ್ಣಾ ಅಂತಾರಲ್ಲ
ಹಾಂಗs ಹಾದೀ ನನ್ಗ!

* * * *

‘ಗಣೇಶ ಚತುರ್ಥೀ ಅಂಬೋದು ನಮ್ಮ ರಾಷ್ಟ್ರೀಯ ಹಬ್ಬ-ಇದು ನಿಮಗೆಲ್ಲಾರಿಗೂ ಗೊತ್ತೇ ಅದ’-ಅಂತ ದನಿ ತೆಗೆದರು ನಮ್ಮ ರಾಮಾ ಶಾಸ್ತ್ರಿಗಳು ಅದೇನಪಾ ಅಂತ ಕೇಳಿದರೆ ಅವರದ್ದೊಂದು ಭಾಷಣ ಇತ್ತಂತೆ ಕೊಪ್ಪಳದಲ್ಲಿ ‘ಜ್ಞಾನ ಹೆಚ್ಚು ಬೆಳೆಯಿರಿ’ ಎನ್ನುವುದು ಭಾಷಣದ ವಿಷಯವಾಗಿತ್ತು ಅದನ್ನು ಕೇಳಿದ ನಮ್ಮ ಆಶ್ರಮದ ಉಪಸಂಪಾದಕ ಮಹಾಶಯನು (ಉಪಸಂಪಾದಕನೆಂದರೆ ಬಹಳ ವಿಷಯಗಳ ಬಗ್ಗೆ ಸ್ವಲ್ಪ ಸ್ವಲ್ಪ ತಿಳಿದವನು ಎಂದು) ಉದ್ಗರಿಸಿದ ಅಂಪರ ಹೆಚ್ಚು ಜ್ಞಾನ ಪರಿಮಾಣದಂತೆಯೋ ಪ್ರಕಾರದಂತೆಯೋ ? ಎಂದು ಚರ್ಚೆ ಎದ್ದಿತು. ಈಗಿನ ಕಾಲದಲ್ಲಿ ಬಹಳ ತಿಳಿದವರೂ ಪ್ರಯೋಜನ ಇಲ್ಲ-ಅಂದ ನಮ್ಮ ಓರ್ವ ಮನಿ ಬೂದ್ಯ ‘ಅದ್ಹೇಂಗಲೇ?’ ಅಂತ ಎಲ್ಲರೂ ಕೇಳಿಬಿಟ್ಟರು ‘ಒಂದು ಬಹಳ ಬಟ್ಟೆ ಹೊತ್ತ ಕತ್ತೆ, ಇನ್ನೊಂದು ಸ್ವಲ್ಪ ವಸ್ತ್ರ ಉಟ್ಟ ಸಿನೆಮ ನಟಿ! ಎಂದು ಬೂದ್ಯ ಉತ್ತರಿಸಿದ ಈ ಒಗಟು ಬಹಳ ಜನರಿಗೆ ಆಶ್ಚರ್ಯವಾದರೂ ಅರ್ಥವಾಗಲಿಲ್ಲ ಆಗ ಅವನು ‘ಕೇಳ್ರಿಲ್ಲೆ’ ಅಂತ ಒಂದು ಅನುಭವಾಮೃತ ಅನ್ನಲಾರಂಭಿಸಿದ.

ಒಂದು ರಾಜೇಶ್ವರನ ಲಾಯದೊ
ಳೊಂದು ಕತ್ತೆಯದೊಮ್ಮೆಯಗಸನು
ಚೆಂದದಿಂದಲಿ ಹೊರಿಸಿದಂತಹ ಸೀರ ಕುಬುಸಗಳ
ಮಂದಗತಿಯಲಿ ಹೊತ್ತು ನಡೆದಿರೆ
ಸುಂದರಾಂಗದ ರಂಭೆಯೊಬ್ಬಳು
ಬಂದು ಕೇಳಿದಳೇಕೆ ರಾಸಭರಾಜ ನೀನಿಂತು ॥೧॥

ನಿನ್ನಲಂಕಾರಕ್ಕೆ ಬಾರದ
ಸೊನ್ನದುಡುಗೆಯ ಹೊತ್ತು ಸಾಗುವೆ?
ನನ್ನ ಸೊಬಗಿಮ್ಮಡಿಸುವುದು ಕೊಡು ರನ್ನದುಡಿಗೆಗಳ
ಎನ್ನುತಲೆ ನಾನಾ ವಿಚಿತ್ರದ
ಬಣ್ಣದುಡುಗೆಯನೆತ್ತಿ ಕೊಟ್ಟಿತು
ತನ್ನ ಕಜ್ಜವ ಮರೆತು ಮಿದುಳಿನ ಸೊನ್ನೆತನದಿಂದ ॥೨॥

ಅತಿಯುಡುಗೆ ಸಿಂಗಾರದಿಂದಾ
ವರಡೆ ವಾರ ಸ್ತ್ರೀ ನಡೆಯುತಿರೆ
ಪುರದ ಪೋಲೀಸರು ತರುಬಿದರು ರಾಜವಸನಗಳು
ದೊರೆತವೆಲ್ಲಿಂದೆಂದು ಗದರಿಸಿ
ಚರುಮವನು ಸುಲಿಸಿದರು! ಧಾವಕ
ಖರರ ಕೊಲಿಸಿದರಿಕ್ಕಿ ಶೂಲಕೆ ನ್ಯಾಯಮುಂದಿರದಿ ॥೩॥

ಬಹಳ ವಿಷಯಜ್ಞಾನ ಪೊತ್ತವ
ರಹಹ ಗುರಿಮರೆದಜ್ಞರಪ್ಪರು!
ಸಹಿಸದಲ್ಪ ವಿಶಿಷ್ಟ ಸುಕಲಾವಿದರು ತಮ್ಮಿದಿರ
ಸಿಹಿಯ ಹೆಚ್ಚಿಸಿಕೊಂಬ ಲೋಭದಿ
ಬಹಿರನಂತವ ಕದ್ದು ಬಳಸುವ
ಕಹಿಗೆಲಸಕೆಯ್ದುತ್ತೆ ಹಾಳಾಗುವರು ಸೂಳೆವೊಲು! ॥೪॥

ತಿರುವಾಂಕೂರು ಕೊಚ್ಚಿ ಪ್ರಾಂತ್ಯದಲ್ಲಿ ವಾರಕ್ಕೆ ತಲಾ ಎರಡು ಔನ್ಸು ಅಕ್ಕಿ ರೇಷನ್ ಕೊಡುತ್ತಿರುವ ಸುದ್ದಿಯನ್ನು ಕೇಳಿ ಆ ಮೂಲಕ ಅಲ್ಲಿಯ ಮತ್ತು ಕೇಂದ್ರದ ಆಡಳಿತೆಯ ಸೊಗಸನು ಅಳತೆ ಮಾಡಿತು ಆಶ್ರಮ ರಾಮರಾಜ್ಯದಲ್ಲಿ ಅನ್ನಕ್ಕೆ ತತ್ವರವಾಗುವುದೇನು ಆಶ್ಚರ್ಯವಲ್ಲ, ಇದೇನು ಅನ್ನಪೂರ್ಣೇಶ್ವರ ರಾಜ್ಯವೆಂದು ಘೋಷಿಸಲ್ಪಟ್ಟಿಲ್ಲವಲ್ಲ? ಎಂದು ಕಾಯಿದೆ ವಾದ ತೆಗೆದರು ಆಶ್ರಮದ ಕಾಂಗ್ರೆಸ್ ಭಕ್ತರೊಬ್ಬರು. ಹತ್ತಿರದ ಅನ್ನಪೂರ್ಣೇಶ್ವರಿ ಲಾಜಿನ ಒಡೆಯರು ಅದಕ್ಕೆ ವಿರೋಧವನ್ನೆತ್ತಿದರು ಏಕೆಂದರೆ ತಮ್ಮ ಹೋಟೇಲಿನಲ್ಲಿ ಕೂಡ ಸಾಕಷ್ಟು ರೇಷನ್ ಸಿಗದೆ ಜೊತೆಗೆ ಅಶ್ವಖಾದ್ಯಗಳನ್ನು ಊಟಗಾರರಿಗೆ ಬಡಿಸುವ ಪ್ರಸಂಗ ಬಂದಿದೆ ಎಂದು ಡಾರ್ವಿನ್ನನ ಎವೊಲ್ಯೂಶನ್ ಥಿಯರಿಯ ಪ್ರಕಾರ ಬೆನ್ನೆಲುಬಿನ ಅಶ್ವಾದಿ ಪ್ರಾಣಿಗಳ ಮುಂದಿನ ವಿಕಾಸ ಫಲವೇ ಮಾನವನಾದುದರಿಂದ ಆಪತ್ಕಾಲದಲ್ಲಿ ಅವನು ಒಂದು ಹೆಜ್ಜೆ ಹಿಂದಿಡುವುದು ಅಷ್ಟೇನೂ ಅನೈಸರ್ಗಿಕವಲ್ಲ ಎಂದರು ಪ್ರೊ ಗದಿಗಯ್ಯನವರು ಮಕ್ಕಳಾಗಿಯೇ ದೊಡ್ಡವರಾದ ಮನುಷ್ಯರಿಗೆ ಚತುಷ್ಪಾದ ಅವತಾರ ಸ್ವಾಭಾವಿಕ ಎಂದರು ಮನೋವಿಜ್ಞಾನಿ ಮರ್ಕಟ ಬಾಬುಗಳು ದ್ವಿಪಾದಗಳ ಆಹಾರ ಹೆಚ್ಚು ಪುಷ್ಟಿಕರ ಎಂದರು ಆರೋಗ್ಯ ವಿಜ್ಞಾನಿ ಅಮೃತ ಸುಂದರರು. ಆಹಾರ ಗುಣ ಬುದ್ಧಿಗುಣವನ್ನು ನಿರ್ಣಯಿಸುವುದರಿಂದ ಸದ್ಯದ ನೈಸರ್ಗಿಕ ಕಂಟಕವನ್ನು ದಾಟುವ ವರೆಗೆ ಪಶುಬಲ ಸಂಪನ್ನತೆ ಮಾನವರಿಗೆ ಅನವಶ್ಯಕವೆಂದರು ತತ್ವಜ್ಞಾನಿ ತಿರುಮುರುಗಯ್ಯನವರು ಪಾಶ್ಚಾತ್ಯ ದೇಶಗಳು ಪಾಶವೀ ಬಲದಲ್ಲಿ ನಮಗಿಂತ ಮುಂದಾಗಿ ಜಗತ್ತಿನಲ್ಲಿ ಆಕ್ರಮಣ ನೀತಿಯನ್ನು ಹಿಡಿದಿರುವ ಈ ಸಂಧಿಯಲ್ಲಿ ಅದಕ್ಕೆ ಮಾರಾಂತು ಹೋರಾಡಿ ಹೊಸದಾಗಿ ಗಳಿಸಿದ ನಮ್ಮ ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಳ್ಳಬೇಕಾದರೆ ನಮಗದು ನಿಸರ್ಗದತ್ತವಾದ ಸದವಕಾಶ ಎಂದು ರಾಜತಂತ್ರ ಧುರೀಣ ತಿರುಮಯ್ಯಂಗಾರ್ಯರು ಸಾಧಿಸಿದರು. ಈ ಸದಕಾರೀ ಘೋರಣದ ಮಹಾ ಸುವರ್ಣನೆಯ ವಾಗ್ಝರಿಯನ್ನಾಲಿಸುತ್ತಿದ್ದ ಗರತಿ ಗೌರಕ್ಕನು ಇದ್ದಕ್ಕಿದ್ದ ಹಾಗೆಯೇ ಒಂದು ಒನಕೆವಾಡನ್ನು ಗೊಣಗು ದನಿಯಿಂದ ಹೇಳತೊಡಗಿದಳು

ನಾನು ಬಯಸಿದ್ದನ್ನೇ ಮಾಡುವಳು ನನ್ನಾಕ
ನಾನೆಣಿಸಿದ್ದನ್ನೇ ನುಡಿವಳು ।
ಮಾನಿನಿ ಎಂದು ಮೋಹಿಗಂಡೆಂಬನು
ಕಾಣನು ತನ್ನ ಹಿತವನು ||೧||

ಕುನ್ನಿ ಹೆಣ್ಣನು ಹಡೆದ ಬಿನ್ನಾಣಗಿತ್ತಿಯು
ತನ್ನ ಕೂಸೊಂದೇ ಋಷಿಪತ್ನಿ ।
ಇನ್ನೊಬ್ಬರಳಿಯರು ದೈತ್ಯಪುತ್ರಿಯರೆಂದು
ಹೊನ್ನ ಹೂವನ್ನೇ ಮುಡಿಸ್ಯಾಳು ||೨||

ಸಂಕ ಮುರಿದೆಡೆಯಲ್ಲೇ ಸ್ನಾನವಾಯ್ತೆಂಬರು
ಮಂಕು ಜೋಯಿಸರು ನೆರೆಮನೆಯ ।
ಲಂಕಿಣಿಯಿದ್ದರು ರಾಣಿಯು ಕವಿಯುಂಬ
ಪಂಕಜನೇತ್ರ ಇವಳೆಂದು ||೩||

ಹೊಟ್ಟೆ ತುಂಬಿದ ಮಂದಿ ಹತ್ತು ಪುಸ್ತಕಪೋದಿ
ಒಟ್ಟೆಲ್ಲ ಕಜ್ಜ ಸೊಗಸಂದು ।
ಇಟ್ಟುಕೊಳ್ಳುವ ಸಾಹೇಬ ಜನಗಳ
ಮುಟ್ಟ ಮುಜರಾಯಿ ಸಲಿಸ್ಯಾರು ||೪||

'ಬಲಭೀಮ ವ್ಯಾಯಾಮಶಾಲೆಯ ಪರವಾಗಿ ಕೇವಲ ಸ್ತ್ರೀಯರ ಸಲುವಾಗಿ ಶಾಸ್ತ್ರೀಯ ಗಾಯನ ಸ್ಪರ್ಧೆ ಏರ್ಪಡಿಸಲಾಗಿದೆ” ಮೊದಲಿನ ಪುಟದಲ್ಲೇ ನಿನ್ನೆಯ ಪತ್ರಿಕೆಯಲ್ಲಿ ಈ ಪ್ರಕಟನೆ ಬಂದಿರುವುದನ್ನು ಕಂಡು ನಮ್ಮ ಜೋಯ್ಸ ರಂಗಾಚಾರ್ಯರ ದೃಷ್ಟಿ ಚಕಿತವಾಯಿತು ಸ್ತ್ರೀ–ಪುರುಷರು ಕಾಯೇನ ವಾಚಾಮನಸಾ ಸಮಾನರೆಂಬ ಈ ಪ್ರಗತಿ ಶೀಲದ ಯುಗದಲ್ಲಿ ಹಿಂದುಗಳಿಗೆ ಕೋಡು ಮೂಡಿದ್ದು ಇಂಥ ಸರಸ ಪ್ರಸಂಗದಿಂದಲೇ ಎಂದು ಅವರು ಉದ್ಗರಿಸಿದರು ಬಲಭೀಮನಿಗೂ ಸ್ತ್ರೀಯರಿಗೂ ಯಾವ ಸಂಬಂಧವಿದೆ ಎಂಬುದನ್ನು ದ್ರೌಪದೀ ದಾಸನಾದ ಮಹಾಭಾರತದ ಹುಂಬ ಭೀಮನು ನಿದರ್ಶಿಸುತ್ತಾನೆ ಸ್ತ್ರೀಯರಿಗೂ ಶಾಸ್ತ್ರಜ್ಞಾನಕ್ಕೂ ಯಾವ ಸಂಬಂಧವಿದೆ ಎಂಬುದನ್ನು ವೇಮನ ಕವಿ 'ವಾದಿಸದಿರ್ವನಿತೆಯರೊಳ್'

ಎಂಬ ನೀತಿಪದದಲ್ಲಿ ಹೇಳಿದ್ದಾನೆ ಇನ್ನು ವ್ಯಾಯಾಮಕ್ಕೂ ಗಾಯನಕ್ಕೂ ಇರುವುದು ಮಿಲಿಟರಿ ಸಂಬಂಧ ವ್ಯಾಯಾಮಕ್ಕೂ ಶಾಸ್ತ್ರಜ್ಞಾನಕ್ಕೂ Brawn ಮಾಂಸಬಲಕ್ಕೂ Brain ಬುದ್ಧಿಬಲಕ್ಕೂ ಇರುವುದು ಬೆಣ್ಣೆ ತೂಗಿಸಿಕೊಂಡ ಬೆಕ್ಕುಗಳಿಗೂ ಮಂಗಕ್ಕೂ ಇರುವ ಸಂಬಂಧ ಗಾಯನಕ್ಕೂ ಶಾಸ್ತ್ರಕ್ಕೂ ಮೇಣ-ಸೂಜಿ-ರಿಗೆಯ ಸಂಬಂಧ ಎಂಬುದು ಸುಪ್ರಸಿದ್ಧವಾಗಿದೆ ಎಂದರು ಆಚಾರ್ಯರು ಆದರೆ ಆ ಕೂಡಲೆ ಆಶ್ರಮದ ಆಧುನಿಕ ಮಹಿಳೆಯಾದ ಉಮೇದಬನು ಎದ್ದು ನಿಂತು ಘನ ಕೋಪಾಟೋಪವುಂತಾಳ್ದು ಅರುಣತರ ತರತ್ತಾರನೇತ್ರಳಾಗಿ—

'ನೀಚನೇ ದುರಾತ್ಮನೇ ಕಠೋರ ಖೂಳಹೇಡಿಯೇ
ಡೇಮೊಕ್ರೆಸಿಯಲ್ಲಿ ಸ್ಥಾನವಿಲ್ಲ ನಿನಗೆತ್ತಿ ನಗಾಟಯೇ!'

ಎಂದು ಮಹಾಕವಿಯ ಸ್ಫೂರ್ತಿಯಿಂದ ದಂಗಯೆದ್ದಳು ಇಡಿ ಸಭೆ ಅವಾಕ್ಕಾಯಿತು! ಸೂಜಿ ಉದುರಿದರೆ ಸದ್ದಾದೀತು ಅಂಥ ನಿಃಶಬ್ದತೆಯುಂಟಾಯಿತು ಸುತ್ತು ಮುತ್ತ ಅಷ್ಟು ಹೊತ್ತಿಗೆ ಬೆಳಗಿನ ೮|| ಗಂಟೆಯಾಗಿತ್ತಾದ್ದರಿಂದ ಶಂಖ ಹಿಡಿದು ನಮ್ಮ ಮೂಗೂರಿನ ಮರಿದಾಸಯ್ಯನು ಬಾಗಿಲ ಬಳಿ ಬಂದು ಜಗನ್ನಾಥ ಜೇಗಟೆ ಹೊಡೆದು ಈ ರೀತಿ ನಕ್ಕ—

ನಗೆಯು ಬರುತಿದೆ। ನನಗೆ
ನಗೆಯು ಬರುತಿದೆ ||
ಸೊಗಸಿನ ಹೊಸ ಹುಂಬರಿಂದು
ಹಗರಣ ಹೇಳುವುದ ಕಂಡು ||ಪಲ್ಲ||

ರೇವತಿಯನು ಉದ್ದವೆಂದು
ರಾಮ ಒನಕೆಯೆತ್ತಿ ಹೊಡೆದು।
ಸಾವರಿಸಿದ ಸಣ್ಣ ಮಾಡಿ
ಎಂಬ ಕತೆಯ ನಂಬುವಂಥ ||೧|| ಸೊಗ

ಭೂಮಿ ಗಗನ ಒಟ್ಟಿದ್ದವು
ಪ್ರಾಣಿಗಳೂ ಮನುಜರೊಡನೆ।
ಪ್ರೇಮದಿಂದ ಮಾತನಾಡು
ತಿದ್ದುದನ್ನು ನಂಬುವಂಥ ||೨|| ಸೊಗ

ಹಿಟ್ಟು ಬೂದಿ ಮಣ್ಣು ಕಲ್ಲು
ಎಲ್ಲ ಒಂದ ಎಂಬ ಬುದ್ಧಿ ।
ಬಿಟ್ಟನಾದ ಪಶುಪತಿವೊಲು
ತಾಳಿದಂಥ ಪಶುಗಳಾದ ||೩|| ಸೊಗೆ
    ಅರ್ಥ ಸಾಮ್ಯದಿಂದ ಹೊರಟು
    ವ್ಯರ್ಥ ಸಾಮ್ಯಗಳನು ನಂಬಿ
    ಮತ್ಸರಿಸುವ ಮಂಗತನದ
    ಕುತ್ಸಿತತೆಯನಪ್ಪಿಕೊಂಬ ||೪|| ಸೊಗೆ

'ವ್ಯಾಪಾರಿಗಳು ಲಾಭಬಡಕರಾದರು ನೌಕರರು ಲಂಚಗುಳಿಗಳಾದರು ಒಕ್ಕಲಿಗರು, ಹಾಲಿಗರು, ತರಕಾರಿಗರು ದನಮತ್ಸ್ಕಣಗಳಾದರು (ದುಡ್ಡು ಹೀರುವ ತಗಣಿಗಳಾದರು,) ಪೋಲೀಸರು ದುಷ್ಕೃತ್ಯ ಪ್ರೇಕ್ಷಕರಾದರು ರೈಲಿನವರು ನಿದ್ರಾಮುದ್ರಿತರಾದರು ಕೂಲಿಕಾರರು ಮುಷ್ಕರಕಾರರಾದರು ಕಳ್ಳರು ಕುಬೇರರಾದರು ಸಾತ್ವಿಕರು ಸಾಯದವರೂ ಬದುಕಲಾರದವರೂ ಆದರು' - ಏನಪಾ ನಿನ್ನ ದುಃಖ? ಮಧ್ಯಮವರ್ಗದವನಂತೆ ನೀನು! ನೀನ್ಹೀಗಿದ್ದೀಯಾ? ಹೇಳು! ಮತ್ತೇಕೆ ಹೀಗೆ ಎಲ್ಲರನ್ನೂ ದೂರುವೆ? ನಾಲಿಗೆ ಹುಚ್ಚಾದರೆ ನಿನ್ನನ್ನು ಕಮ್ಯುನಿಸ್ಟನೆಂದು ಸರಕಾರ ಹಿಡಿದು ಹಾಕೀತು, ಜೋಕೆ! ನಿನ್ನಂಥ ದಾಸಪಂಥ ಹಿಡಿದವರು ಹುಚ್ಚಾಗಿಯೇ ಉಳಿಗಾಲ ಹೋಗಿ ಅಳಿಗಾಲ ಬಂದಿರುವುದು. ಪೂರ್ವದಲ್ಲಿ ಧರ್ಮೋತ್ಥಾಪನಕ್ಕೆ ಬ್ರಾಹ್ಮಣರು ಕ್ರಾಂತಿಕಾರಿಗಳಾದರೆ ಇಂದು ನಿನ್ನ ವರ್ಗದವರಿಗೆ ಆ ಕರ್ತವ್ಯ ಗಂಟುಬಿದ್ದಿದೆ. ಆದರೆ ನೀನು ಹೇಡಿ—ಹೆಂಡತಿ ಮಕ್ಕಳ ಹೊಟ್ಟೆ ಹೊರೆಯಲಾರದೆ ಅವಳಿಗೆ ಸ್ವತಂತ್ರಳಾಗೆಂದು ಹೇಳಿ, ಅಪ್ಪನ ಆಸ್ತಿಯಲ್ಲಿ ಪಾಲು ತೆಗೆದುಕೊಂಡು ಬಂದ ಹೊರತು ಮನೆಮೆಟ್ಟಿಲು ಹತ್ತಬೇಡ ಎಂದು ಹೆದರಿಸಿ, ಹುಚ್ಚಿಗೆ ಮಾತಾಡಿದರೆ ವಿವಾಹವಿಚ್ಛೇದ ಮಾಡಿಕೊಡಲಿಕ್ಕೆ ಪ್ರಾರಂಭಿಸಿಬಿಟ್ಟಿದ್ದೀಯಾ! ಅಯ್ಯೋ ಗಂಡಸೇ—ಮೀಸೆ ಬೋಳಿಸಿದವನೇ! ಸಂಸ್ಕಾರ, ವಿದ್ಯೆಯಾವುದಿದ್ದರೇನು, ಧೈರ್ಯವಿಲ್ಲದವನಿಗೆ, ನೀನು ಹೀಗೇ ಇರುವೆಯಾದರೆ ಮಧ್ಯಮವರ್ಗವೆಂದರೆ ಗಂಡಸರಿಲ್ಲದ

ಹೆಂಗಸರ (ಹಳೇ ಈಡಿಯಂ ಪ್ರಕಾರ, ಹೆಂಗಸರು ಕೋಪಿಸಿಕೊಳ್ಳಬಾರದು.) ವರ್ಗ ಎಂದು ಜಗತ್ತಿಗೆ ಸಾರಿಬಿಡುತ್ತೇನೆ ನೋಡು!

ಕಲಿಯುಗದಲ್ಲಿ ಕಲ್ಲುಕೋಳಿ ಕೂಗಿ ಮುಲ್ಲಾಸಾಬ ಚೂರಿ ಹಾಕಿದರೂ, ನೀರುದನವನ್ನು ಕಲ್ಲುಹುಲಿಯಿದ್ದು ತಿನ್ನ ಹೋದರೂ ಮೂಲಹೋಗಿ ಆಟಂಬಾಬು ತಗೆದುಕೊಂಡು ಸಿಂಹವನ್ನು ಕೊಂದರೂ ಮಧ್ಯಮವರ್ಗದವನು ಹುಚ್ಚರಾಸ್ಪತ್ರೆಗಳಲ್ಲದೆ ಇನ್ನಾವುದಕ್ಕೂ ಅರ್ಹನಾಗನಯ್ಯಾ ಮರುಳಸಿದ್ಧ ಮಹೋದರಾ!

ಮಧ್ಯವರ್ಗದಮಾನವಾ
ನಿ। ರ್ವಿದ್ಯರಿಗು ಕೀಳಾದವಾ!
ಮದ್ಯಕೂಡಾ ಸಿಕ್ಕದೋ
ನೀ। ವಧ್ಯನೇ ಎಂದಪ್ಪುದೋ!
ಮರಣ ನಿನಗೋಬಾರದು
ಜೀ। ವನವು ನಿನ್ನೆಡೆ ಸೇರದು,
ಹಗಲು ಬೆಳಕನು ತೋರದು
ಇ। ರುಳಲ್ಲಿ ಕಣ್ ಕೈ ಸಾರದು!
ನೀನೆ ನಿನ್ನನು ನಂಬೆಯೋ
ನಿ। ನ್ನಲ್ಲಿ ನಿನಗೆಡೆಯಿಲ್ಲವೊ,
ಸಿರಿಯ ಲೋಕವ ಹಿಡಿಯುವೆ
ಕೈ। ಜಾರಿ ಹೋಯ್ತೆಂದೊರಲುವೆ!
ಗಂಡಸಿಗೆ ನೀಹಗುರುವೋ
ಹೆಂ। ಡಂದಿರಿಗೆ ಗಿರಿಭಾರವೋ,
ಬಡವನೋ ದೊಡ್ಡಾತನೊ?
ಮ। ತ್ತದರೊಳೋತಪ್ರೋತನೋ!

❀ ❀ ❀ ❀

"ಒಡೆಯತನ ಗೊತ್ತಿಲ್ಲದ ಒಡೆಯರ ಹಾವಳಿಯಿಂದ ಅಧಿಕಾರ, ಅರ್ಥ, ಭೂಮಿ, ಕಾರಖಾನೆ, ವಸ್ತುಸಂಗ್ರಹ, ಜ್ಞಾನ ಎಲ್ಲವೂ ಅಪಾತ್ರ ವಿನಿಯೋಗಕ್ಕೆ ತುತ್ತಾಗಿವೆ ನಾನು ಪಾತ್ರ ತಾನು ಪಾತ್ರ ಎಂದು ಪ್ರತಿ

ಯೊಬ್ಬ ಅಪಾತ್ರನೂ ತನ್ನ ಪಾತ್ರವನ್ನು ಪ್ರದರ್ಶಿಸುತ್ತಾನೆ ಎಲ್ಲ ಮಣ್ಣು ಪಾತ್ರಗಳೇ! ಚಿನ್ನದ ಪಾತ್ರಕ್ಕೆ ಮಾತ್ರ ಬಾಯಿ ಇಲ್ಲ ಬಾಯಿ ಇದ್ದರೂ ಬೀಗದೊಳಗೆ!" ಎಂದು ಹೇಳುವ ಸಂದರ್ಭ ಬಂತು ಇಂದು ನ್ಯಾಯ ದರದ ಅಂಗಡಿಗೆ (Fair Price Shop) ಹೋಗಿದ್ದೆ ಅಲ್ಲಿ ಸಾಲು ಪಟ್ಟಿಯಲ್ಲಿ ನಿಂತೆ (ಕ್ಯೂ ಕೂಡಿಕೊಂಡು) ನನ್ನ ಸರದಿ ಬಂದರೆ ಮುಂದಿನ ಸರದಿಯವರು ಬಳಸಿಕೊಳ್ಳುತ್ತ ನಡೆದರು ಹೇಳುವವರಿಲ್ಲ ಕೇಳುವವರಿಲ್ಲ ಅಧಿಕಾರಿ ಕಡೆಗೆ ಕೇಳುತ್ತೇನೆ ಸುಮ್ಮನಿದ್ದಿರೇಕೆ? ಎಂದು ಏನು ಎರಡು ಬಿಗಿಯಬೇಕಾಗಿತ್ತ ಬಲಾತ್ಕಾರ ಮಾಡಿದವನಿಗೆ? ಎಂದರೆ, ನಿಮ್ಮಂಥ ಮುದುಕರು ಇಲ್ಲಿಗೆ ಬರಬಾರದು ಎನ್ನುತ್ತಾನೆ ಹಣ್ಣೆಲೆ ಉದುರುವಾಗ ಕಾಯೆಲೆ ನಕ್ಕ ಹಾಗಾಯಿತಲ್ಲವೇ ಇದು? ಹಾಗೆ ಖಾಲಿ ಜೋಳಿಗೆ (ಹಸಿಗೆ) ಹಿಡಿದು ಮನೆಗೆ ಬರುವಾಗ ಹಾದಿಯಲ್ಲೊಬ್ಬ ಬೀದಿಗವಾಯಿ ಅಮೃತ ಉಣಿಸಿದ

ಮುದುಕನಾಗೀ ಬದುಕಿ ಫಲವೇನು ?
ಈ ಲೋಕದಲ್ಲಿ . ||ಪ||
ಎಲ್ಲಿ ಹುಟ್ಟಿದರೇನು ನರನಾತ್ಮ ।
ಭೂವಲಯದಲ್ಲಿ । ನ್ನೇನ ಕಲಿತೊಡದೇನು ಪುರುಷಾರ್ಥ ॥
ಎಲ್ಲಿ ಮುಟ್ಟಿದರಲ್ಲಿ ದಹಿಸುವ
ಎಲ್ಲಿ ಮೆಟ್ಟಿದರಲ್ಲಿ ಕಚ್ಚುವ
ಬಲ್ಲಿದನ ಬಲವಿಲ್ಲದಾದರೆ
ಕಲ್ಲಿಗೂ ಕಡೆ ನರನ ಜೀವನ ||೧||
ಸರದಿ ಕಾಯುವ ನಾಗರಿಕನಾಗಿ
ಭಾರತದಿ ಬಾಳುವ । ಸದಭಿಮಾನವ ಬಿಟ್ಟವನೆ ಗೆದ್ದ ॥
ಘುರದಿ ಶಾಪ ಶರಪ್ರಯೋಗದಿ
ಶಿರವ ಕಡಿಯಲು ಬರದ ಜನಗಳು
ಮುದುಕರೆನಿಸುವರಯ್ಯ ಅವರನು
ವಧಿಸಿದರು ಕೇಳ್ವವರೆ ಸಿಕ್ಕರು ||೨||
ಕೊಲ್ಲಬಲ್ಲವರಷ್ಟೆ ಯುವಜನರು ।

ಕೋವಿಗಳ ಗುಂಡಿಯು । ನೊತ್ತ ಬಲ್ಲವರಷ್ಟೆ ಕೋವಿದರು ॥
ಎಲ್ಲವನು ಕದ್ದೊಯ್ವ ಬುದ್ಧಿಯು
ಎಲ್ಲಿಕಾಣದೊ ಅಲ್ಲಿ ಮುಪ್ಪಿದೆ
ಎಲ್ಲ ಕಾಂಗ್ರೆಸ್ಸೆಲ್ಲ ಕಾಯದ
ಕಾಯಿದೆಗೆ ಕಾವಲುಗಳಿರದೆಲೆ ||೪||

ಯಾರೋ ಹೇಳುತ್ತಿದ್ದರು ಆಟಂ ಬಾಂಬನ್ನು ಅಮೇರಿಕ ಪ್ರಯೋಗಿಸಿತು ಹ್ಯೂಮನ್ (ಮಾನವ್ಯ) ಬಾಂಬನ್ನು ಜಪಾನು ಪ್ರಯೋಗಿಸಿತು ಇದರ ಮೇಲೆ ಹಾಲಿವುಡ್ಡಿನವರು ಅನಟಾಮಿಕ್ ಬಾಂಬನ್ನು (ಶರೀರ ವಾಯುಗಳ ಬಾಂಬನ್ನು) ಪ್ರಯೋಗಿಸಿದರು ಎಂದು ಒಂದನೆಯದರ ಅರ್ಥ ಹೇಳುವುದೇ ಬೇಡ ಎರಡನೆಯದೆಂದರ ಬಾಂಬೊಯ್ವ ವಿಮಾನದ ಸಾರಥಿ, ಬಾಂಬು ಮತ್ತು ವಿಮಾನ ಈ ಮೂರೂ ಏಕಕಾಲದಲ್ಲಿ ಶತ್ರುವಿನ ಮೇಲೆ ಬಿದ್ದು ಅವನನ್ನು ಇಲ್ಲವೆ ಅವನ ಆಸ್ತಿಯನ್ನು ನಾಶ ಮಾಡಿ ಅಲ್ಲೇ ಸ್ವತಃ ನಷ್ಟ, ಹೊಂದುವುದು, ವಿನಾಶವಾಗುವುದು ಮೂರನೆಯದೇನಪಾ? ಅಂದೆ ತಿಳಿಯಿತೆ? ಏನು ತಿಳಿಯಿತು ನಿಮಗೆ? ಸ್ವಲ್ಪ ತಡೆಯಿರಿ ಶರೀರದ ವಿಶಿಷ್ಟ ಅವಯವಗಳಲ್ಲಿ ಕೆಲವನ್ನು ಆಯುಧವನ್ನಾಗಿ ಬಳಸುವವರು ಸಾಧನವನ್ನಾಗಿ ಮಾಡಿಕೊಂಡು ಹಣ ಗಳಿಸುವವರು ಯಾರು? ಒಂದು ಡೊಂಬರು, ಸರ್ಕಸ್ಸಿನವರು, ಜಟ್ಟಿಗಳು. ಎರಡು ಅವರಿಗಿಂತ ಹೆಚ್ಚು ಗಳಿಸುವವರು ನರ್ತಕರು, ಗಾಯಕರು, ಅಭಿನಯಕಾರರು, ವೇಶ್ಯೆಯರು ಹಾಲಿವುಡ್ಡೆಂದರೆ ತಾರಾಲೋಕ, ಚಲಚಿತ್ರದ ತವರೂರು, ಶೃಂಗಾರ ಸಮುದ್ರ, ಅಭಿನವ ಪ್ಯಾರಿಸ್ ಇಲ್ಲವೆ ಇಂದ್ರಭವನ ಅಲ್ಲಿ ಅನಟಾಮಿಕ್ ಬಾಂಬ್–ಅಂದರೆ ಶಾರೀರಿಕ ಶತಘ್ನಿ–ಮಾನವನ ಮನಸ್ಸು, ದೇಹ, ಅರ್ಥಗಳನ್ನು ಲಯಗಳಿಸುವ ಸಾಧನದ ಎಂದರೆ ಪಣ್ಯಾಂಗಯಷ್ಟಿಯ ಪ್ರಯೋಗ ನಡೆಯಿತಂತೆ! ಇದೇನು ಹೊಸದೆ? ಇಂಥ ಪ್ರಯೋಗಗಳು ಭೋಗದಾಸರಾದ ಕುಬೇರರಲ್ಲಿ ಅನಾದಿಯಿಂದಲೂ ನಡೆದುಕೊಂಡು ಬಂದಿದೆ ಮಾಡುವವರಿದ್ದರೆ ನೋಡು ನನ್ನ ಭಾಗ್ಯ, ಕೊಳ್ಳುವವರಿದ್ದರೆ ಕಾಳಿನ ಬೆಲೆಗೇನು ಕಡಿಮೆ? ಅರಕ್ಷಿತ ದೇಹ ಮನಸ್ಸು–

ಅರ್ಥಗಳಿದ್ದಲ್ಲಿ ಬಾಂಬಿನ ಬಿಂಕಕ್ಕೆ ಮೇರೆಯುಂಟೇ? ಹಾಲವುಡ್ಡಿಗೆ ಹೋಗುವವರು ಭೋಗಿಗಳು, ಭುಜಂಗರು, ಧನ ದೈವತರು–ಅಂದ ಮೇಲೆ ಅವರಿಗೆ ಅದೇ ಸುಕುಮಾರಪ್ರಹರಣ! ಹೆಣವಿದ್ದಲ್ಲಿ ಹದ್ದು ಹಾಯುತ್ತದೆ ಇಂಥವರಿದ್ದೆಡೆಗೇ ಅಂಥ ಬಾಂಬು ಬೀಳುತ್ತದೆ ದೀಪವಿದ್ದೆಡೆಗೇ ಪತಂಗ ಹಾರುತ್ತದೆ ಅಂಥ ಬಾಂಬಿನ ಮೇಲೆ ಹಾರಿಯೇ ಸರ್ವಸ್ವ ಕಳೆದುಕೊಳ್ಳುವರು ಅದರಲ್ಲೇನಾಶ್ಚರ್ಯ?

ನಾಯಿಗು ಕೋಲಿಗು, ಕೋತಿಗು ಕೊರಡಿಗು
ಕತ್ತೆಗು ಲತ್ತೆಗು ಗಂಟಣ್ಣಾ।
ದಡ್ಡಗು ಬೆತ್ತಕು, ಕೇಡಿಗು ಬೇಡಿಗು
ಹುಲಿಗೂ ಬೋನಿಗು ನಂಟಣ್ಣಾ॥ ೧
ತುಂಟಗು ಬಂಟಗು, ತುರುಸಿಗು ಮೆಣಸಿಗು
ಲೋಭಿಗು ಕಳ್ಳಗು ಗಂಟಣ್ಣಾ।
ಲಂಚುಗುಳಿಗು ಜೇಲಿನ ಹುರಿಪಂಜರಕು
ಎಣ್ಣೆಗು ಸೀಗೆಗು ನಂಟಣ್ಣಾ॥ ೨
ಅಮೇರಿಕದ ಬ್ಯಾಂಕಿಗನಿಗು ಹಾಲೀ
ವುಡ್ಡಿನ ತಾರೆಗು ಗಂಟಣ್ಣಾ!
ಭಾರತ ದೇಶದ ಹೇಡಿ ಪ್ರಜೆಗೂ
ಮಹಾಮುದರಿಗೂ ನಂಟಣ್ಣಾ॥ ೩.

❀ ❀ ❀ ❀

ಕುಬೇರರ ಲೋಭದಿಂದ ಕುಚೇಲರು ಬಳಲುವರೆಂಬ ಕೂಗು ಕಸಿಕರ ಹುಟ್ಟಿಸುವಂಥದೆಂಬುದರಲ್ಲಿ ಸಂಶಯವಿಲ್ಲ. ಹಲವರು ಹೌದೆಂದು ತಿಳಿದರೆ ತಪ್ಪಲ್ಲ ಆದರೆ ಮೊನ್ನೆ ರೈಲು ಬಂಡಿ ಹತ್ತಿದ ರಂಗಕ್ಕನ ಅನುಭವವೇ ಬೇರೆ ರೈಲು ಬಂದಿತು. ಜನ ನುಗ್ಗಿತು. ಹೇಗೆ? ದಿವಾಳಿಯಲ್ಲಿ ಬೆದರಿದ ದನ ಬೇಲಿಯಲ್ಲಿ ನುಸುಳುವಂತೆ. ಕೈಯಲ್ಲಿ ಗಂಟನ್ನು ಹಿಡಿದ ರಂಗಕ್ಕನು ಪ್ರವೇಶಿಸುವಷ್ಟರಲ್ಲಿ ರೈಲು ಹೊರಟಿತು. ಕಣ್ಣಿದ್ದೂ ಕುರುಡನಾದ ಪ್ಯಾಸೆಂಜರ್ ಪಿಶಾಚನೊಬ್ಬನು ಅವಳನ್ನು ಹೊರ ನೂಕಿದನು. ಕಾಂಬವರಾರು? ಕೇಳುವವರಾರು? ಜನಜಂಗುಳಿ ಜಾತ್ರೆ

ನೇರಿತ್ತು ಕಣ್ಣು ಬಿಡುವುದರ ಹೊರತು ಬಾಯಿ ಬಿಡುವುದನ್ನು ಬಲ್ಲುದೇ ಅದು? ಗಾಂಧೀಜಿ ಅಂದಂತೆ ಅದು ಮೂಕಕೋಟಿ ಅಧಿಕಾರಿಗಳೋ ಕುಚೇಲತನದಿಂದಲೇ ಕಣ್ಣನ್ನೇ ಕಳೆದುಕೊಂಡವರು,ಅದೆಂತು? ಪೀನೋದೇವ ದತ್ತಃ ದಿವಾನ ಭುಂಕ್ತೆ-ಹಗಲಿನಲ್ಲಿ ಊಟ ಮಾಡುವುದಿಲ್ಲ ಆದರೆ ದೇವದತ್ತನು ಆನೆಮರಿಯಂತಿದ್ದಾನೆ, ಅಂದರೆ ರಾತ್ರಿಯಲ್ಲಿ ಚೆನ್ನಾಗಿ ಕತ್ತರಿಸುತ್ತಾನೆ ಅಧಿಕಾರಿಗಳು ಕತ್ತರಿಸುವುದೇನನ್ನು? ಲಂಚದ ಪಂಚಭಕ್ಷ್ಯ ಪರಮಾನ್ನವನ್ನು ಬಸುರಿ ರಂಗಕ್ಕನ ಗತಿ? ದೇವರೇ ಗತಿ! ಬಿಟ್ಟಿ ಉಂಟೆ ಬಸವಯ್ಯ ಕೆಟ್ಟು ಹೋದ ಎಂಬಂತೆ ಅಧಿಕಾರಿಗಳು ಸರ್ಕಾರಕ್ಕೂ ಹೆದರರು ಜನರಿಗೂ ಅಂಜರು ಸಂಬಳವಿಲ್ಲದೆ ಅತ್ತವರು ಕುಂಬಳವನ್ನು ಕದ್ದು ಮಾರಲು ಕಲಿತಿದ್ದಾರೆ ರಂಗಕ್ಕ ಸುಧಾರಿಸಿಕೊಂಡೇಳುವಷ್ಟರಲ್ಲಿ ರಂಗನಾಥನ ಭಕ್ತ ರಾಮದಾಸನು ಬರಬೇಕೆ? ಬಂದವನು ಹಾಡಿಯೇ ಹಾಡಿದ

ರಂಗನನ್ನು ನಂಬಿದವಗೆ
ರಾಜ್ಯ ಕೋಶದಾಶೆಯಿಲ್ಲ,
ಅಂಗಜಪಿತ ಭಕ್ತ ವರಗೆ
ಅಂಗನೆಯರ ಪರಿವೆಯಿಲ್ಲ!
ರಾಧೆಯೋಪನೆಡೆಗೆ ಸೇರಿ
ಹೋದ ನನಗೆ ಹೆಂಡಿರಿಲ್ಲ,
ಕಾದಲೆಯರ ಮೇದಿನಿಯಲಿ
ಬೋಧೆ ನಾನು ಬಲ್ಲರೆಲ್ಲ!
ಭಾರತದಲಿ ಹುಟ್ಟಿ ಭೂಮಿ
ಭಾರರಾಗಿ ಬಾಳ್ವ ಯೋಗ,
ಯಾರಿಗುಂಟು ನನ್ನ ಹಾಗೆ
ಊರುನುಂಡು ಮೆರೆವ ಭೋಗ?
ಪ್ರೇಮಿಸುವೆನು ನೀಡುವವರ,
ಹೋಮಿಸುವೆನು ನೀಡದವರ,
ರಾಮದಾಸ ಬೋಧಿಸುವೀ
ನೇಮವನ್ನು ಪಾಲಿಸು ನರ!

● ● ● ●

ಗಣೇಶಚೌತಿ ಮಾಡಿಯೇಮಾಡಿತು ನಮ್ಮೂರ ಜನ ಕಡುಬಿನ ಕಾಳಗ, ಉಂಡೆಯ ಪಂದ್ಯ, ಪಂಚಕಜ್ಜಾಯದ ಪಂಚಾಯತಿಕೆ—ಒಂದೇ ಎರಡೇ ವಿಧಾನಗಳು! 'ಅಬ್ಬಾ!' ಎನ್ನುವಂತೆ ಹಬ್ಬಮಾಡಿತು ಮಂದಿ ಸಾರ್ವಜನಿಕ ಗಣಪತಿ, ಮನೆಗಣಪ್ಪ, ಸಾಲಿಯ ವಿನಾಯಕ ಎಂಬ ವಿವಿಧ ಜಾತಿಯ ಗಣಪತಿಗಳು ತಂತಮ್ಮ ದರ್ಬಾರು ಹಾಲಿನಲ್ಲಿ ಒಡ್ಡೋಲಗ ಕೊಡುತ್ತಿದ್ದವು ಒಂದಕ್ಕಿಂತ ಒಂದರ ಹೊಟ್ಟೆ ದಪ್ಪ, ಆದರೆ ತಲೆ ಮಾತ್ರ ಒಂದಕ್ಕಿಂತ ಒಂದರದು ಸಣ್ಣ! ಅದು ಮಾಡಿದವನ ತಲೆಯನ್ನು ಪ್ರತಿಬಿಂಬಿಸುತ್ತದೆ, ಮಾಡಿಸಿದವನ ಹೃದಯವನ್ನು ಚಿತ್ರಿಸುತ್ತದೆ, ನೋಡುವವರ ದೃಷ್ಟಿಯನ್ನು ಸ್ಪಷ್ಟಪಡಿಸುತ್ತದೆ ಹಿಂದುಸ್ಥಾನದಲ್ಲಿ ಎಂದರೆ ಬಹಳ ವಿಶಾಲವಾಗಿ ಹೋದೀತು—ತಂತಮ್ಮ ಎಡಬಲದ ಮನೆಗಳಲ್ಲಿ ಅನ್ನ ವಸ್ತ್ರ ವಿದ್ಯೆಗಳಿಲ್ಲದ ಅಭಾವರಸಕ್ಕೆ ಕರಗಿದ ರಸಿಕರು ವಿದ್ವಾಂಸರ ವ್ಯಾಖ್ಯಾನ ಕೇಳಲು ಕುಳಿತಿರುವ ಮೋಜೇಮೋಜು! ಸಾಹಿತ್ಯವು ಜೀವನದ ಪ್ರತಿಬಿಂಬವಾದರ ಗಣಪತಿಯ ಹೊಟ್ಟೆಯು ಭಕ್ತರ ಉದರನೀತಿಯನ್ನು ಪ್ರತಿಬಿಂಬಿಸುತ್ತದೆ ಎನ್ನಬೇಕು ಇಂದಿನ ಕಾಲದಲ್ಲಿ. ನಾನೂ ಪ್ರಚ್ಛನ್ನನಾಗಿ ಒಂದು ವ್ಯಾಖ್ಯಾನವನ್ನು ಕೇಳಲು ಹೋಗಿದ್ದೆ ಭಾಷಣಕಾರ ವಿದ್ಯಾಮೂರ್ತಿಯಾದ ಗಣಪತಿಯಿಂದ ನೈವೇದ್ಯಮೂರ್ತಿತ್ವವನ್ನು ಮಾತ್ರ ಅನುಕರಿಸುವ ದ್ವಿಪದಿ (Bipeds)ಗಳನ್ನು ಕುರಿತು ನಮ್ಮ ಬಸವಪ್ಪನಲ್ಲೊಂದು ಪದ್ಯಹಾಡಿದ ಅದು ಹೀಗಿತ್ತು—

ಶಂಭುಶಿವೆಯರಂದೊಮ್ಮೆ ಗಣಪತಿಯ
ರೂಪಿಸಿದರು ಕುಳಿತು
ತಲೆಯದಪ್ಪಿಸಿದರೆಂದು ಬುದ್ಧಿಬಲ
ತೇಜವಿರುವುದೊಳಿತು
ಗಂಗೆ ಕಂಡಳೀಸವತಿಯ ಮಗನಿಗೆ
ಮಾಡುತೇನೆ ಮದ್ದು—
ಎಂದು ನೀರು ತುಂಬಿದಳು ಹೊಟ್ಟೆಯಲಿ
ಕಲಿಯುಗದಲ್ಲೆದ್ದು!

ಸಿಟ್ಟಿಗೆದ್ದು ಗಣಪತಿಯು ಮೂಗನ-
ದ್ದುದ್ದ ನೀಡಿಸುತ್ತ,
ಕುಡಿದು ಗಂಗೆಯನು ಜಡರತಲೆಗಳಲಿ
ಹರಿಸಿಬಿಟ್ಟನತ್ತ!
'ಜಡ'ಕೆ ನೀರು ಎಂದರ್ಥ ಬಂತು ಈ
ಜಂಡಭವಾಂಡದಲ್ಲಿ;
ಜಡರು ಹೆಚ್ಚಿ ನೀರುಂಡರಾದರೋ
ಕಲಿಯ ಕಾಲದಲ್ಲಿ!
ತೊಗಲಿಗಲ್ಲದೇ ತಲೆಗೆ ಬೆಲೆಯು ಕೊಡ
ದಾಯ್ತು ಲೋಕವಿಂದು--
ಹಗಲಿನಲ್ಲೆ ಕಂಡರೂ ಸತ್ಯದಾ
ಗುರುತುಹತ್ತದೆಂದೂ!
ಬಾಲ ಸುಟ್ಟರೂ ತಿಳಿಯದಂಥ ನರಿ
ಯಾಯಿತಿಂದು ಮಂದಿ--
ನಾಯಿಹಿಡಿದರೂ ತನ್ನ ಮುಖವ ಮು
ದ್ದಿಸುತ್ತಿತ್ತು ಹಂದಿ!
ಪರರಮನೆಗೆ ಬೆಂಕಿಯನು ಹಾಕಿ ಸುಡು
ವರು ಪಟಾಕಿಯನ್ನು,
ನರರು ನರರನೇ ತಿಂದು ತೇಗುವರು
"ಕೊಟ್ಟು ಸಾಲವನ್ನು!
ಕೊಬ್ಬಿದವರದೀಹಬ್ಬ! ಡುಬ್ಬ ಕರ-
ಗಳಿವಹಾಗೆ ದುಡಿವ
ಮಬ್ಬುಜನಕೆ ತೋರುವರು ಹಾರವನು
ಹೊಟ್ಟೆಹೊತ್ತು ಮುಡಿವ!

❁ ❁ ❁ ❁

ಅತ್ತೆಸೊಸೆಯರಲ್ಲಿ ಯಾರದು ನ್ಯಾಯ? ಎಂಬ ಚರ್ಚೆ ಶಿಷ್ಯವರ್ಗದಲ್ಲಿ ನಿನ್ನೆ ಬಂದಿತು. ಸೊಸೆ ಮೊದಲು ಮನೆಹೊಕ್ಕಾಗ ಅಜ್ಞಾನಿಯೂ

ಮೂರ್ಖಳೂ ಅವಿನಯ ಸಂಪನ್ನಳೂ ಹೃದಯಹೀನಳೂ ಆಗಿದ್ದಳು ಅತ್ತೆ ತಾಯಿಯಂತೆ ಇದ್ದಳು ಕಾಲಕಳೆದಂತೆ ಸೊಸೆ ಜಡಳೂ ಮೂರ್ಖಳೂ ಕೋಪಿಯೂ ಪಿಸುಣಳೂ ಆದಳು ಅತ್ತೆಯ ಸಹನೆ ಕಡಿಮೆಯಾಗುತ್ತ ಹೋಯಿತು ಒಂದು ವರುಷದನಂತರ ಗಂಡನ ಕೈಬಲದಿಂದ ಅಪ್ಪನ ಉಪದೇಶಬಲದಿಂದ ಸೊಸೆಯೆಂಬ ಹೆಣ್ಣಿನ ಹೃದಯ ವಿಕಾಸಹೊಂದ ತೊಡಗಿತು ಆದರೆ ಅಷ್ಟುಹೊತ್ತಿಗೆ ಅತ್ತೆಯ ಮನಸ್ಸು ಕಹಿಯಾಗಿ ಹೋಗಿತ್ತು ಅವಳಿಗೆ ಸೊಸೆಯನ್ನು ಕಂಡರೆ ಮಾರಿ, ಮಸಣಿ, ಪಿಶಾಚದಂತೆ ಕಾಣುವಷ್ಟಾಗಿ ಹೋಗಿತ್ತು ಆದುದರಿಂದ ಅವಳು ಸೊಸೆ ಮಾಡಿದ್ದೆಲ್ಲ ತಪ್ಪೆಂದು ಉಗ್ರವಾಗಿ ಪ್ರತಿಬಟಿಸತೊಡಗಿದಳು ಮೊದಲು ಸೊಸೆ ಜನರಿಗೆ ಅಪ್ರಿಯಳೆನಿಸಿದ್ದಳು ಅವಳೀಗ ಸುಪ್ರಿಯಳಾಗಿ ಅತ್ತೆಯೇ ಕೆಟ್ಟವಳೆನಿಸುವ ಹೊತ್ತು ಬಂದಿತು ತಪ್ಪು ಯಾರದಿಬ್ಬರಲ್ಲಿ? ಇಬ್ಬರನ್ನೇ ತೆಗೆದುಕೊಂಡರೆ ಸೊಸೆಯದೇ ತಪ್ಪು ಏಕೆಂದರ ಗಂಡನ ಮನೆಗೆ ಬರುವಾಗ ಪರೀಕ್ಷ ಪಾಸಾಗಿ ಡಿಗ್ರಿ ಪಡೆದು ನೌಕರಿಗೆ ಸೇರುವವನಂತೆ ಗುಣಶೀಲ ಕರ್ಮಗಳಲ್ಲಿ ಒಂದು ಮಟ್ಟಕ್ಕೆ ಮುಟ್ಟಿದವಳೆಂದೇ ಗಂಡನ ಮನೆಯವರು ತಿಳಿದುಕೊಳ್ಳಬೇಕಾಗುವುದಲ್ಲದೆ ಅವಳೊಂದು ಮಗುವೆಂದು ಪಾಠಶಾಲೆಗಾರಂಭಿಸುವುದು ಅಸ್ವಾಭಾವಿಕ ಹೀಗಾಯಿತು ನಮ್ಮ ಲೀಲವ್ವನಿಗಿಂತ ಅವಳನ್ನು ಭೂಲೋಕಕ್ಕೆ ತರಲು ದೇವರೊಡನೆ ನೂರಕ್ಕೆ ೫೦ ಪಾಲುದಾರರಾಗಿ ನಿಂತ ಅವಳ ತಾಯ್ತಂದೆಯರೇ ಕಾರಣರೆನ್ನಬೇಕಾಗುವುದಿಲ್ಲವೆ? ಅವರೇ ಮಕ್ಕಳಿಗೆ ಮೊದಲ ಗುರುಗಳು. ಅವರು ಪ್ರೇಮಪಾರವನ್ನು, ಶುಶ್ರೂಷಾಶ್ರದ್ಧೆಯನ್ನು, ವಿನಯಸೌಂದರ್ಯವನ್ನು, ವಿಚಾರಶಕ್ತಿಯನ್ನು ಮಗಳಿಗೆ ಕೊಡದುದೇ ಇಷ್ಟು ಅನಾಹುತಕ್ಕೆ ಕಾರಣವಾಯಿತಲ್ಲವೆ? ಅದರಲ್ಲೂ ತಂದೆಗಿಂತ ಮಕ್ಕಳಿಗೆ ತಾಯ ನೀತಿಧರ್ಮ ಸದ್ಭಾವ ಪ್ರಚೋದನೆಯೇ ಹೆಚ್ಚು ಪರಿಣಾಮಿಯಾದುದರಿಂದ ತಾಯ ಭಾಗದ ತಪ್ಪೇ--ಅದರಲ್ಲೂ ಹೆಮ್ಮಗಳಿಗೆ—ಹೆಚ್ಚಲ್ಲವೇ? ಮೇಲಿನ ವಾದವನ್ನು ನನ್ನ ಗುರುಸಿದ್ಧ ಈ ದಿನ ತೆಗೆದ. ಅವನು ಆಧುನಿಕ ಮನಃಶಾಸ್ತ್ರಿಯಿದ್ದಾನೆ. ಆದರೆ ನಮ್ಮ ಕರಕರೆ ದಾಸರು ಆಧ್ಯಾತ್ಮ ಭಕ್ತರಿದ್ದಾರೆ. ಅವರ ಹೇಳಿಕೆಗೂ ಅವನ ಹೇಳಿಕೆಗೂ ವ್ಯತ್ಯಾಸವೇ ಇಲ್ಲ.

ತಾಯಿತಂದೆಗಳೆಂಬರಾರು ?
ತಮ್ಮ। ಕಾಯದ ಸುಖವೊಂದನೆಣಿಸುವರೇನು ? ||ಪ||
ಹೊಣೆಯರಿಯದ ಹುಚ್ಚುಮಂಗ।
ದೊಡ್ಡ। ಬೆಣೆಕಿತ್ತು ಬಾಲ ಸಿಕ್ಕಿಸಿಕೊಂಡಿತಂತೆ ||
ಋಣಭಾರವರಿಯದ ಲೋಕ।
ತನ್ನ। ಅಣುಗರಿಂದಪಕೀರ್ತಿಗಾಳಾಯಿತಂತೆ ||
ಕೆಸರಿಗೆ ಕೈಯಿಕ್ಕಲಾರ।
ಕೆನೆ। ಮೊಸರಿಗೆ ಬಾಯ್ನೀರುಬಿಡುವನು ಪೋರ ||
ಋತಿಬಂದಂತಿರಬೇಕೆಂಬಾಕೆ।
ತನ್ನ। ಹಸುಳೆಗಳಿಗೆ ಮೃತ್ಯುವಾದಾಳು ಜೋಕೆ ||
ಬೇಲಿಹಾರುವ ಬುದ್ಧಿಬೇಡ।
ನಿನ್ನ। ಕಾಲಿಗೆ ಮುಳ್ಳು ಚುಚ್ಚುವುವಲ್ಲೋ ಮೂಢ ||
ಹಾಲುಕುಡಿದು ಹೋಗುವಾತ।
ನಿನ್ನ। ಪಾಲಿನ ಹಣಕೊಟ್ಟು ಹೋಗಯ್ಯ ಹೋತ ||
ಅಜ್ಞಾನಿಗಿಲ್ಲ ಸ್ವಾತಂತ್ರ್ಯ
ಸೊಸೆ। ಗಜ್ಞಾನದಿಂದಲೆ ಬಂದಿತುದಾಸ್ಯ ||
ವಿಜ್ಞಾನ ವಿಧಿಯಾವುದೊಂದೂ।
ನಿನ್ನ। ಪ್ರಜ್ಞೆಯಿಲ್ಲದೆ ಫಲಿಸವು ಪೋರಿಕಂಡ್ಯಾ||
ಸ್ಥಾನಮಾನವನರಿತಾಡು।
ನೀನು ಶ್ವಾನನಾದರೂ ಲೋಕಮರ್ಯಾದೆ ಕೊಡುಗು ||
ಕಾಲಾಕಾಲವನರಿತೋಡಿ।
ಚಿಕ್ಕ। ಆವೆ ಗೆದ್ದಿತು ನರಿಯನು ಕೂಡ ನೋಡು ||

❀ ❀ ❀ ❀

'ಜಿನ್ನಾ ಸಾಬೇಬರು ತೀರಿಕೊಂಡರು!' ಎಂದು ಎಲ್ಲ ಪತ್ರಿಕೆಗಳಲ್ಲೂ ಪ್ರಕಟವಾಗಿದೆ ಈ ದಿವ ಕಡೆಗೂ ಪಾಕಿಸ್ತಾನ ಪಡೆದೇ ಸತ್ತ—ಎಂದು ಅವರ ಛಲದಂಕಮಲ್ಲತನವನ್ನು ಕೊಂಡಾಡುವವರೂ ಅಲ್ಲಲ್ಲಿ ಸಿಕ್ಕಿದರು. ಅವರು ಪಡೆದದ್ದು ಪಾಕಿಸ್ತಾನವನ್ನೋ ಪರದೇಶಿಸ್ತಾನವನ್ನೋ—ಎಂಬು

ದಿನ್ನು ಬಯಲಾಗುವ ಕಾಲಬಂತು ‘ಸತ್ತಮೇಲೆ ಗೊತ್ತಾಯ್ತು ಸಟ್ಟೆಯ ಬಂಡವಾಳ’ ಎಂಬ ಗಾದೆಯಂತೆ ಜಿನ್ನಾ ಸಾಹೇಬರ ಇಹಲೋಕದ ಆಳಿಕೆ ಮುಗಿದನಂತರವೇ ಅವರು ಸಾಧಿಸಿದ್ದೇನೆಂಬುದನ್ನು ಜಗತ್ತು ತಿಳಿಯಲಿದೆ ಪಾಕಿಸ್ತಾನದಲ್ಲಿ ಇದ್ದಷ್ಟು ದಿನ ಸರ್ವಾಧಿಕಾರ ವಹಿಸಿ ಮೆರೆದದ್ದೊಂದೇ ಅವರ ದೊಡ್ಡ ವೈಭವ! ಈಗ ಖುದಾಸಾಹೇಬರು ಅವರನ್ನು ಸ್ವರ್ಗದಲ್ಲಿ ಚಿನ್ನದ ತೇರಿನ ಮೇಲೆ ಕೂರಿಸಿ ಮೆರವಣಿಗೆ ಮಾಡುತ್ತಿರಬಹುದು. ಇಸ್ಲಾಂ ಧರ್ಮವನ್ನು ರಕ್ಷಿಸಿದ ಬಿರುದು ಅವರದಲ್ಲವೆ? ಧರ್ಮರಕ್ಷಕರಾದುದರಿಂದ ತಮ್ಮ ಪ್ರಜಗಳಿಗ ಈ ಕಲೀಫರು ತೊಂದರೆ ಕೊಡಬಾರದೆಂದು ತಾವೇ ಸ್ವತಃ ಅಪ್ಪಣೆಕೊಟ್ಟು ರಾಜ್ಯ ನಡೆಸಿದ್ದಲ್ಲದೆ, ಪಾಕಿಸ್ತಾನದ ಕಾಯಿದೆಗಳನ್ನು ಸ್ವತಃ ದಾರ್ಶನಿಕರಂತೆ ತಮಗೆ ಕಂಡಂತೆ ಸ್ವಪುರುಷಾರ್ಥದಲ್ಲಿ ರಚಿಸಿ ಫರ್ಮಾನ್ ಹೊರಡಿಸುತ್ತಿದ್ದರು! ‘ಏಕಮೇವಾದ್ವಿತೀಯಂ ಬ್ರಹ್ಮ’ ಎಂದ ಆದಿ ಋಷಿಗಳನ್ನು ಮೀರಿಸಿದ ವ್ಯಕ್ತಿ ಎಂದರೆ ಇವರೇ ಅಲ್ಲವೆ? ಇದೇ ಮಾತು ನಮ್ಮ ಫಕೀರ ಸೈಯ್ಯದ್ ಸಾಹೇಬರು ತಮ್ಮ ‘ಶಾಯಿರ್’ಗಳಲ್ಲಿ ಹೇಗೆ ವರ್ಣಿಸುತ್ತಾರೆ ಗೊತ್ತೇ?

ಯಾಹಿಲಾಹಿ ಯಾಹಿಲಾಹಿ ಯಾಹಿಲಾ ।
    ಫಾತಿಮಾಕೋ ಮುಸ್ತಫಾ ಏಕ್ ಚೂಮ್ ದಿಲಾ ॥ಪ॥
ಅ–ಲ್ಲಾಕನಾಮ್ ಸೇ ಬೋಲ್ ರಹಾಹೂ
    ಬಾತ ಮೇರೀ ತುಂ ಸುನೋ ।
ಇ–ಸ್ಲಾಮುಕೋ ಆಜಾದ ಜಿನ್ನಾ
    ಕರ್ ದಿಯಾ ಆಜ್ ಭಾಯಿಯೋ ॥
ಯಹ್ ಜಿಂದಗೀ ಅಂಧೇರೆಮೇ ಸಬ್
    ಪಡ್ ಗಯಾಥಾ, ದೇಖ್ ವೋ ।
ಅಲ್ಲಾ ಉಪರಸೇ ಫಾತಿಮಾಕೋ
    ಚೂಮ್ ದಿಯಾ ಹಸ್ ಕರ್ ಸುನೋ ॥
ತಬ್ ಕ್ಯಾ ಹುವಾ? ಆಕಾಶಮೇ
    ಬಿಜುಲೀ ಚಮಕತೀ ಆಗಯೀ ।
ಜಿ–ನ್ನಾಕೆ ಮಾಬಾಪ್ ದೇಖ್ ಗಯೀ

ವೋ ರಾತ್ ಖುಶೀಸೇ ಚಲ್‌ಗಯೀ !
ಪೈ-ದಾಹುವಾ ಇಸ್ಲಾಮಿಕಾ ಪರ್-
ವರ್‌ದಿಗಾರ್ ಲೀಡರ್ ಬಡೇ ।
ಝುಂ-ಡಾ ಖುದಾಕಾ ಝೂಲೆ ಹಿಂದು-
ಸ್ತಾನಮೇ ಇಸ್ಲಾಂ ಬಢೇ ॥
ಅ-ಲ್ಲಾ ಕೆವ್ರೋ ಹೈ ರೋಶನೀ ಇ-
ಸ್ಲಾಮಿಯೋಂಕಾ ಸಬ್‌ಕ ಸಬ್ ।
ಚಲ್-ದಿಲ್‌ಮೆ ಪಾಕಿಸ್ತಾನಕೋ ತ-
ಯ್ಯಾರಕೀ, ದೇಖೋ ಜನಾಬ್ ॥
ಉಸ್-ಕಾಮಮೇ ಫತ್ತೇಮಿಲಾಯಾ
ಜಿನ್ನ ಸಾಹಬ್ ಅಬ್‌ತೊ, ಹಾಯ್
ವೇ-ಚಲ್‌ಗಯೇ ದುನಿಯಾಸೆ ಹಮ್ ಸಬ್
ಆಜ್ ಬಿಚಾರೇ ಬನ್‌ಗಯೇ ॥

ಗಾಂಧಿಯವರು ಹಿಂದುಸ್ತಾನದ ನೀತಿಯ ಊರುಗೋಲಾಗಿದ್ದರು. ಮುಸಲ್ಮಾನರು 'ಬಿಸ್ ಮಿಲ್ಲಾಹ್' ಎಂದು ತಮ್ಮ ಸರ್ವ ಕಾರ್ಯಗಳನ್ನೂ ಪ್ರಾರಂಭಿಸುವಂತೆ ಹಿಂದೀಯರು ಹಿಂಸೆ, ಅಹಿಂಸೆ, ಸತ್ಯಾಗ್ರಹ, ಅಸತ್ಯಾಗ್ರಹ, ಧರ್ಮ, ಅಧರ್ಮ, ಉಪಕಾರ, ಅಪಕಾರ, ಸ್ವಾರ್ಥ, ಪರಾರ್ಥ ಈ ಎಲ್ಲವನ್ನೂ ಮಹಾತ್ಮರ ಹೆಸರಿನಲ್ಲಿ ಮಾಡಿಬಿಟ್ಟರೆ ಪಾವನವಾಗಿ ಬಿಡುತ್ತದೆಂದು ತಮ್ಮ ಪಾವನ ಸ್ವಾತಂತ್ರ್ಯ ಸಮರವನ್ನು ಪ್ರಾರಂಭಿಸಿ, ಅದನ್ನು ತಮ್ಮ ಕುಲಗುರುವಿನ ಕೊಲೆಯಿಂದ ಕೊನೆಗಾಣಿಸಿಬಿಟ್ಟರು ಎಲ್ಲ ಹಾಲನ್ನೂ ಒಂದೇ ಬಾರಿಗೆ ಅರೆದು ಬಿಡುವೆನೆಂದು ಕಚ್ಚಲು ಕೊಯ್ದ ಹಾಲಿಗನಂತೆ ತಮ್ಮ ಸಾರ್ವಕಾಲಿಕ ಅರಾಜಕ ಕಾರ್ಯಗಳಿಗೆ ಒಮ್ಮೆಲೇ 'ಲಾಯಿಸೆನ್ಸ್' ಪಡೆದು ಬಿಡುವೆನೆಂದು ಇವರು ಬುಡಕ್ಕೇ ಕೊಡಲಿ ಹಾಕಿದರು ಈ ಬೃಹಸ್ಪತಿ ಬುದ್ಧಿಯು ಹಿಂದೀಯರಲ್ಲಿ ಹುಟ್ಟಲು ಕಾರಣವೇನು? ಎಂದು ತಜ್ಞರೆಲ್ಲರೂ ಸೇರಿ ಭಾರಿ ಸಂಶೋಧನೆ ನಡೆಸಿದರು ಎಷ್ಟು ತಿಣುಕಿದರೂ ಗುಟ್ಟು ಗೊತ್ತಾಗಲಿಲ್ಲ ಕೆಲವರೆಂದರು ಜ್ಯೋತಿರ್ಮತಿ ತೈಲವನ್ನು ತಲೆಗೆ ಪ್ರಯೋಗಮಾಡಿ

ಕೊಂಡಿದ್ದರಿಂದ ಎಂದು ಹಿಂದೊಬ್ಬ ಪಣ್ಣಾಣಿ ಅದನ್ನು ಕುಡಿದು ಸಾಯದೆ ಬದುಕಿ, ಅವರ ಕವಿತ್ರಿಯಾದಳೆಂದು ಐತಿಹಾಸಿಕ ಸಂಶೋಧಕನೊಬ್ಬನು ಆಧಾರಕೊಟ್ಟನು ಆದರೆ ಆಧುನಿಕರಾದ ಉಳಿದ ವಿಜ್ಞಾನಿಗಳು ಅದೆಲ್ಲ ಪೌರಾಣಿಕವೆಂದು ಪರಿಹಾಸಮಾಡಿಬಿಟ್ಟರು

ಅಷ್ಟರಲ್ಲಿ ಕುಲಶೈಲದಂತಹ ತನ್ನ ತಲೆಯನ್ನೆತ್ತಿ ಜ್ಞಾನೇಂದ್ರ ಪಂಡಿತನೆಂಬ ಶಾಸ್ತ್ರಜ್ಞನು—ಅದೆಲ್ಲ ಗ್ರಾಹ್ಯವೆನಿಸಲಾರದು ಅವರು ಜ್ಞಾನಚೂರ್ಣವನ್ನು ಸೇವಿಸಿದ್ದರಿಂದಲೇ ಅಂತಹ ಕುಶಾಗ್ರಮತಿಯನ್ನು ಪಡೆದರೆಂದು ನನಗೆ ಭಾಸವಾಗುತ್ತದೆ–ಎಂದನು ಇದನ್ನು ಕೇಳಿ ಎಲ್ಲರೂ ಅವಾಕ್ಕಾದರು! ಇದಾವ ಅಭಿನವ ಧನ್ವಂತರಿಯ ಶೋಧವೆಂದು ತಮ್ಮ ಚಕಿತ ನಯನಗಳಿಂದಲೇ ಪ್ರಶ್ನಿಸಿದರು ಆಗ ಭಾರತೀಯ ಭಿಷಗ್ರತ್ನನೆನಿಸಿದ ಜ್ಞಾನೇಂದ್ರಪಂಡಿತನು ಜ್ಞಾನಚೂರ್ಣದ ಹದವನ್ನು ಬಿತ್ತರಿಸಿದನು.

ತಮಾಖುಪತ್ರವೆಂಬ ಒಂದು ಬಗೆಯ ವನಸ್ಪತಿಯುಂಟು ಅದರ ಬಗ್ಗೆ ಭಿಷಗಿಂದುಗ್ರಂಥದಲ್ಲಿ ಹೀಗೆ ಹೇಳಿದೆ–––

'ತಮಾಖು ತ್ರಿವಿಧಿಂ ಪ್ರೋಕ್ತಂ
ದೇವಾನಾಮಪಿ ದುರ್ಲಭಂ।
ಕ್ವಚಿದ್ಧುಕ್ಕಾ ಕ್ವಚಿ ತ್ಘುಕ್ಕಾ
ಕ್ವಚಿನ್ನಾಸಾಗ್ರಗಾಮಿನೀ ॥'

ಅರ್ಥಾತ್ ದೇವತೆಗಳಿಗೂ ದುರ್ಲಭವಾದ ತಮಾಖುಪತ್ರವನ್ನು ಮಾನವ ಪ್ರಪಂಚದಲ್ಲಿ ಮೂರು ರೂಪಗಳಲ್ಲಿ ಕಾಣಬಹುದು ಒಂದನೆಯದಾಗಿ, ಹುಕ್ಕಾ ಇಲ್ಲವೆ ಸೇದುಗಡ್ಡಿಯಲ್ಲಿ ಶಕಲರೂಪದಲ್ಲಿ, ಧುಕ್ಕಾ ಇಲ್ಲವೆ ತಾಂಬೂಲದೊಡನೆ ತನ್ನ ಸ್ವರೂಪದಲ್ಲಿ ಸುಣ್ಣದೊಡನೆ ಸೇರಿ ಮೂರನೆಯದಾಗಿ ಲೌಕಿಕರು ನಶ್ಯವೆಂದು ಕರೆಯುವ ಮತ್ತು ವಿಜ್ಞಾನಿಗಳು ಜ್ಞಾನಚೂರ್ಣವೆಂದು ಕರೆಯುವ ಚೂರ್ಣರೂಪದಲ್ಲಿ ಈ ಜ್ಞಾನಚೂರ್ಣವೆಂಬುದು–

'ಅರಸುಗಳಿಗಿದು ವೀರ, ವೈಯಂ
ತುರಿಸುವರಿಗಿದು ಮದ್ದು, ನಿರತಂ
ಹಿರಿಯರಾಜ್ಞೆಯು ಪೂರ್ವ ತುಂಟರ ಕಣ್ಣಿಗಮೃತವಲಾ।

ವರ ಕವಿಗಳಾಸ್ಫೂರ್ತಿ, ಪಂಡಿತ
ವರರ ಪಂಚಿಕೆಯ ಕೀರ್ತಿ, ಸನ
ಸ್ತರ ಸುಬೋಧದ ಮೂರ್ತಿ, ಬೇತಾ
ವ್ಯಪಿಲ ರೋಗಹರ||'

ಎಂದು ವಿಜ್ಞಾನವಲ್ಲಿಯೆಂಬ ಉಪನಿಷತ್ತಿನಲ್ಲಿ ಹೇಳಿದೆಯೆಂದು ೨ನೆಯ ಕುಮಾರವ್ಯಾಸನು ಸಾರಿದ್ದಾನೆ

ಈ ವಿವರದಿಂದ ಸಮಸ್ತರೂ ಸಂತೃಪ್ತರಾದರು
ಜ್ಞಾನಚೂರ್ಣಕ್ಕೆ ಜಯವಾಗಲಿ!

ಕಾಂಗ್ರೆಸ್ಸನ್ನು ಪುನರ್ಘಟಿಸಬೇಕೆಂದು ಮಹಾತ್ಮರೆಂದಂತೆ ಕಾಂಗ್ರೆಸ್ಸಿಗರಿಂದು ಹೊಸ ಘಟನೆಯ ಕರಡೊಂದನ್ನು ತಯಾರಿಸಿದ್ದಾರೆ ಅದರಲ್ಲಿ ಹಳ್ಳಿಯ ಪಂಚಾಯತವನ್ನೇ ಮೂಲಾಧಾರವನ್ನಾಗಿ ತೆಗೆದುಕೊಳ್ಳಲಾಗಿದೆ ಹಿಂದುಸ್ಥಾನದ ೬೦ ಲಕ್ಷ ಹಳ್ಳಿಗಳ ಉದ್ಧಾರವೇ ಅವರ ಧ್ಯೇಯ. ಘಟನೆಯ ಕರಡನ್ನು ಸಮೀಕ್ಷಿಸಿದರೆ ಅದು ಗಾಂಧೀ ತತ್ವಮಯವಿದೆಯೆಂಬುದು ಸ್ಪಷ್ಟವಾಗುತ್ತದೆ ಇಂತಹ ಗ್ರಾಮಪಂಚಾಯತಿಗಳನ್ನು ಒಂದಕ್ಕೊಂದು ಜೋಡಿಸಿ ಹೆಣೆದು, ವೃತ್ತದೊಳಗೆ ವೃತ್ತ ತಯಾರಿಸಿ ಕೇಂದ್ರದಲ್ಲಿ ಅಧ್ಯಕ್ಷನನ್ನು ಕುಳ್ಳಿರಿಸಲಾಗಿದೆ. ಈ ಕ್ರಮವೇನೋ ನ್ಯಾಯವಾದದ್ದೇ ಇದೆ, ಪ್ರಜಾಸತ್ತಾತ್ಮಕವೇ ಇದೆ ಆದರೆ ಇದರಲ್ಲಿ ಒಂದು 'ಪಂಚಾಯತಿ' ಅಡಗಿ ಕುಳಿತಿದೆ ಅದೆಂದರೆ ಗಾಂಧೀ ನಿಯಮಪಾಲಕ ಮಾತ್ರ ಈ ಪಂಚಾಯತಕ್ಕೆ ಸದಸ್ಯನಾಗಬಲ್ಲ, ಅಂದರೆ ಸ್ವಂತ ತಯಾರಿಸಿದ ಖಾದಿವಸ್ತ್ರ ಧರಿಸಿಕೊಂಡು ನಯೀತಾಲೀಮಿನ ಶಿಸ್ತನ್ನು ಪಾಲಿಸಿಕೊಂಡಿರಬೇಕಲ್ಲದೆ ಅಹಿಂಸಾಚರಣನಿಷ್ಠನಾಗಿರಬೇಕು ಈ ಶುದ್ಧ ಸನಾತನಿ ತತ್ವಗಳನ್ನು ಕಪಟಿಗಳು ನಾಟಕೀಯವಾಗಿ ಆಚರಿಸಿ ಗಾಂಧಿಯವರ ಹೆಸರನ್ನು ತಮ್ಮ ಸ್ವಾರ್ಥಕ್ಕಾಗಿ ದುರುಪಯೋಗಪಡಿಸಿಕೊಳ್ಳದಿರರೆಂಬುದು ಅನುಭವಸಿದ್ಧವಾದುದು. ಜಾತೀಯತೆಯನ್ನು ಬೋಧಿಸಿದ ಗಾಂಧಿಯವರು ಈ ಖಾದಿಜಾತಿಯೊಂದನ್ನು ನಿರ್ಮಿಸಿದ್ದರಿಂದ ಜನಿವಾರ ಮಾತ್ರದಿಂದ ಬ್ರಾಹ್ಮಣನಾಗಿ ಉಳಿದ ಇಂದಿನ ನಾಸ್ತಿಕರಂತೆ ವಸ್ತ್ರಮಾತ್ರದಿಂದ ಕಾಂಗ್ರೆಸಿಗರಾಗಿ ಉಳಿವ

ಸದಸ್ಯರನ್ನು ಉಳಿದ ರಾಜಕೀಯ ಪಕ್ಷಗಳ ವಿರುದ್ಧ ಸಿಕ್ಕಿಸಿದಂತಾಗಿದೆ ಹಾಗಲ್ಲದೆ ರಾಜಕೀಯ ನಿಯಮಗಳಷ್ಟನ್ನೇ ವಿಧಿಸಿದ್ದರೆ ಹಿಂದುಸ್ಥಾನದ ೩೦ ಲಕ್ಷ ಹಳ್ಳಿಗರೂ ಪಂಚಾಯತ ಸದಸ್ಯತ್ವಕ್ಕೆ ಸುಲಭವಾಗಿ ಅರ್ಹರಾಗ ಬಹುದಿತ್ತಲ್ಲದೆ ಕಾಂಗ್ರೆಸ್ಸಿನಲ್ಲಿರುವ ರಾವಣಸನ್ಯಾಸಿಗಳ ಮಾಯಾಜಾಲ ದಿಂದ ದೂರ ಇರಲು ಅನುಕೂಲವಾಗುತ್ತಿತ್ತು

ಒಟ್ಟಿನ ಮೇಲೆ ಈಗಾದ ಪಂಚಾಯಿತಿಯೆಂದರೆ—

ಗಡ್ಡದ ಪೈರನು ಬೆಳೆಸಿದ ನರರಲಿ
ಯತಿಯೂ ಇರಬಹುದು—
ಬಲು ದು। ರ್ಮತಿಯೂ ಇರಬಹುದು,
ಲುಂಗಿಯ ಸುತ್ತಿದ ಮಾನವರಲ್ಲಿ
ಮುಸ್ಲಿಮನಿರಬಹುದು—
ಮೇಣ್ ಮ। ದ್ರಾಸಿಯು ಇರಬಹುದು !
ಮೊಲೆಯುಳ್ಳಂತಹ ಜೀವಿಗಳಲ್ಲಿ
ಮೇಕೆಯು ಇರಬಹುದು—
ಅಲ್ಲದೆ, ಹೋತನು ಇರಬಹುದು,
ಖಾದಿಯ ಧರಿಸಿದ ಕರ್ಮಠರಲ್ಲಿ
ಕುಬೇರನಿರಬಹುದು—
ಅವನಾಳ್ । ಕುಚೇಲನಿರಬಹುದು !

ಹೀಗೆ ಗೋಮುಖಪ್ರಾಣಿಗಳಲ್ಲಿ ವ್ಯಾಘ್ರವು ವೇಷಾಂತರದಿಂದ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಸದವಕಾಶ ಸಿಕ್ಕಂತಾಗಿದೆ ವ್ಯಾಪಾರಿ ಮಧ್ಯಸ್ಥರು, ದೊಡ್ಡ ದೊಡ್ಡ ಜಮೀನದಾರರು ಮತ್ತು ಗಿರಣಿ ಕಾರಖಾನೆ ಮಾಲೀಕರು ತಮ್ಮ ಆಳುಗಳ ಆರ್ಥಿಕೋನ್ನತಿಯನ್ನು ಇಷ್ಟರ ಮಟ್ಟಿಗೆ ಸಾಧಿಸಿದಲ್ಲದೆ ಸದಸ್ಯರಾಗಲಾರರೆಂಬ ಮೂಲಭೂತ ತತ್ವವನ್ನೇ ಮರೆತ ಮೇಲೆ ಇಂತಹ ಕರಡಿನಿಂದ ದೀನೋದ್ಧಾರವಾದೀತೆ ?

* * * *

ಗಾಂಧಿ ಕೊಂದ ಗೋಡ್ಸೆಗೆ ಮರಣದಂಡನೆ ವಿಧಿಸಿದರೆ ಗಾಂಧಿತತ್ವವಾದ ಅಹಿಂಸೆಗೆ ಅವಮಾನ ಮಾಡಿದಂತಾಗುವುದೆಂದು ಗಾಂಧೀಭಕ್ತರ ಅಂಬೋಣ

ಆದರೆ ಗೋಡ್ಸೆ ಯಾವದೋ ಬಗೆಯ ಬ್ರಾಹ್ಮಣನೆನಿಸಿದ್ದ ಮಾತ್ರಕ್ಕೆ ಆ ಸೇತು ಹಿಮಾಚಲ ಪರ್ಯಂತ ಇರುವ ಬ್ರಾಹ್ಮಣಪ್ರಮುಖರಲ್ಲಿ ಹಲವರನ್ನು ಜಾತ್ಯಂಧರು ಚಿತ್ರಹಿಂಸೆಗೆ ಗುರಿಮಾಡಿದರೆ ಎಲ್ಲಿ ಕಾಂಗ್ರೆಸ್ ಸರಕಾರಗಳ ಪೋಲೀಸರೂ ಮನೆ ಸುಟ್ಟಮೇಲೆ ಬಾವಿ ತೋಡಹೊರಡುವ ಘೋರಣೆ ತಳೆದಿದ್ದಕ್ಕೆ ಅನೇಕ ನಿದರ್ಶನಗಳು ಸಿಕ್ಕಿವೆ ಈ ಕಾಯಕದ ಒಳಗುಟ್ಟೇನು? ಸರದಾರ ಪಟೇಲರ ಗರ್ಜನೆ, ಕುಣಿತ, ಶಂಖನಾದ ಹೊಸಗಿಯೇ ಮೊಳಗಿತು, ಕಾಶ್ಮೀರದಲ್ಲಿ ದಿಲ್ಲಿ ಸರಕಾರ ದಿನಕ್ಕೆ ನಾಲ್ಕುಲಕ್ಷ ವೆಚ್ಚ ಮಾಡಿಯೇ ಮಾಡುತ್ತಿದೆ—ದಂಗೆಗಾರರು ತಮ್ಮ ಹಲ್ಲೆ ನಡೆಸಿಯೇ ನಡೆಸಿದ್ದಾರೆ ಇದರಿಂದ 'ಮೆತ್ತಗಿದ್ದವನಿಗೆ ಮತ್ತೊಂದು ಗುದ್ದು, ಧುತ್ತೆಂದು ಬಂದವನಿಗ ದೂರದ ಸಲಾಮು' ಎಂಬ ಪ್ರವೃತ್ತಿ ಕಾಂಗ್ರೆಸ್ ಅಧಿಕಾರಿಗಳಲ್ಲಿ ಕಂಡು ಬರುವುದಿಲ್ಲವೇ? ಆಳಿಗೆ ಬೂಟಿನಿಂದ ಒದೆದ ಅಧಿಕಾರಿ ಹೆಂಡತಿಯೆದುರು ಥರಥರಿಸಿದಂತ ದೇಶದ ಮಹಾಸಭೆ, ಸಮಾಜವಾದಿ ಸಂಘ ಇವುಗಳ ಮೇಲೆ ಹರಿಹಾಯ್ದು ಈ ಪೋಲೀಸು ಸರಕಾರ ಸಶಸ್ತ್ರ ಪುಂಡರೆದುರು ಗರುಡನಿಗೆದುರಾದ ನಾಗದಂತೆ ನರ್ತಿಸುತ್ತಿದೆ ಇದು ವಾದಿಯ ಗುಣವೋ ಇಲ್ಲವೆ ಲಂಚತನವೋ—ಹಾಗೂ ಇರಬಹುದು ಬಂಡವಾಳಿಗರನ್ನು, ಕೂಲಿಕಾರರನ್ನು, ಜಾತ್ಯಂಧರನ್ನು, ಪುಂಡರನ್ನು, ಪರದೇಶದ ಬಲಿಷ್ಠ ರಾಷ್ಟ್ರಗಳ ಮುತ್ಸದ್ದಿಗಳನ್ನು, ಗಾಂಧಿಯವರ ಈ ಅಹಿಂಸಾವಾದವನ್ನು— ಈ ಸಕಲ ಪರಸ್ಪರ ವೈರಭಾವವುಳ್ಳ ವರ್ಗಗಳನ್ನು ಏಕಕಾಲದಲ್ಲಿ ಮೆಚ್ಚಿಸ ಹೋಗಿ ಅ ಭಾ ಕಾಂಗ್ರೆಸ್ಸಿಂದು ಏನು ಮಾಡಬೇಕೆಂಬುದರಿಯದೆ ಕುರುಡಾಗಿದೆ–ಮೂಢವಾಗಿದೆ–ಕೆಲವೊಮ್ಮೆ ಮೂರ್ಖವಾಗಿದೆ ಸಂಗತಿ ಸಂಗದೋಷ, ಕೊರಳಿಗೆ ಶಿವದೊಣ್ಣೆಯೆಂಬಂತೆ, ಮುದುಕ ಕಟ್ಟಿದ ಸಂಸ್ಥೆ ಮುದುಕನಷ್ಟೇ ಕಾರ್ಯದಕ್ಷತೆಯುಳ್ಳದ್ದೆನಿಸಿದರೆ ಆಶ್ಚರ್ಯವೇನು? ಒಮ್ಮೆ ೮೦ ವರ್ಷದವನು ೧೪ ವರ್ಷದ ಹುಡುಗಿಯನ್ನು ಮದುವೆಯಾದನು ಪತಿವ್ರತೆಯಾದ ಅವಳಿಗೆ ಚೊಚ್ಚಿಲ ಸಂಭ್ರಮವಾದ ೮೦ ವರ್ಷದ ಕಳೆಯೇ ಮೊಗದಲ್ಲಿ ತುಂಬಿಕೊಂಡಿತ್ತು. ಹಾಗೇ ಕಾಂಗ್ರೆಸ್ಸಿಂದು ವೃದ್ಧಪತ್ನಿಯಾಗಿ ಪತಿವ್ರತೆಯೆನಿಸಿದೆ! ಕಲಿಕಾಲದ ಒಬ್ಬ ಸುಖಪರಾಯಣೆಯಾದ ನಾಲ್ಕನೆಯ ಹೆಂಡತಿ ಹೇಳಿದಳಂತೆ:

ಹಾಸಿಗೆಯಲಿ ಹೊರಳುತಿಹನು
ನನ್ನ ಮುದುಕ ಗಂಡನು,
ವಾರಗಿತ್ತಿ ಬೈಯುತೆನ್ನ
ನಾಚಿ ಮನೆಗೆ ನಡೆದಳು—
ಮನೆಯ ಆಳು ದನವ ಹುಡುಕಿ
ಕೊಂಡು ಬರಲು ಹೋದನು,
ಎಲೆಲೆ ಪಥಿಕ, ಒಬ್ಬಳೇ ಅ—
ದೆಂತು ಕಾಲ ಕಳೆವೆನು !

ಪಥಿಕ ಆ ಮಾತಿಗ ಕಾರ್ಯರೂಪದಿಂದ ಉತ್ತರಕೊಟ್ಟನು. ಮುದುಕನು ಇಂತು ಹೌಹಾರಿ—

ಕುಟ್ಟಿಬಿಡುವೆನಲ್ಲಿ ಆಳು-
ಮಗನು ಬರಲಿ ಸೂ ವ ಗ
ಎತ್ತ ಹೋದಳೀಕೆ ಅಯ್ಯೋ
ಎತ್ತಲೆಂತು ಈ ವೊಗ !
ಬದುಕಬೇಕು ನೂರು ವರುಷ,
ಮಕ್ಕಳೆರಡು ಬೇಕಲಾ—
ಆದರಾಕೆ ಗರತಿಯಾಗಿ ನಡೆದು
ಉಳಿಯಬೇಕಲಾ !

ಗೋಡ್ಸೆ ವಿಚಾರಣೆಯೆಂಬ ಮಹಾನಾಟಕವನ್ನು ದಿಲ್ಲಿ ಸರಕಾರ ಆರಂಭಿಸಿ ಮನೋರಂಜನೆಮಾಡಿ ಹೊಟ್ಟೆಬಟ್ಟೆಗಿಲ್ಲದ ಜನರ ಮನಸ್ಸನ್ನು ಕೆಲಕಾಲ ಅನ್ಯಾಸಕ್ತ ಮಾಡುವ ಪ್ರಯತ್ನದಲ್ಲಿದೆ. ಈ ಆಟ ಎಲ್ಲಿಯ ವರೆಗೆ ಸಾಗೀತು? ದಿನವೂ ಸಾಯುವ ಗಂಡನ ಬಗ್ಗೆ ಅಳುವವಳಾವಳು? ಈ ನರ ನಾಟಕವನ್ನು ಸವಾಲು ಪ್ರತಿಸವಾಲು, ಧರ್ಮ, ಅಧರ್ಮ ಎಂದು ಕೊಂಡು ಇಷ್ಟೆಲ್ಲ ವಿಸ್ತಾರವಾಗಿ ಮಾಡುತ್ತಿರುವುದರಿಂದ ಯಾರಾದರೂ ಚಲಚ್ಚಿತ್ರ ನಿರ್ಮಾಪಕರು ಈ ದೃಶ್ಯವನ್ನು ಗ್ರಹಿಸಲು ಬಂದಿರಲೇ ಬೇಕೆನ್ನಿ ಸುತ್ತದೆ. ಬಂಡವಾಳಿಗರನ್ನು ಬೆಂಬಲಿಸಲು ಇದೂ ಒಂದು ಸಾಧನವಾ ದಂತಾಯಿತು ಗಾಂಧಿಯವರ ಜೀವನಚರಿತ್ರೆಯನ್ನು ಗ್ರಹಿಸಿ ಚಿತ್ರ

ತಯಾರಿಸಿ ರೊಕ್ಕ ಸುಲಿದವ ಸುಲಿದೇ ಸುಲಿದ. ಈಗ ಇದು ಆದರ ಮುಂದಿನ ಪ್ರಕರಣ. ಹದ್ದಿದ್ದಲ್ಲಿ ಯಾವುದಾದರೂ ಹೆಣ ಬಿದ್ದೇ ಇರುತ್ತದ ಎಂಬಂತೆ ಈ ಬಂಡವಾಲಿಗರಿದ್ದಲ್ಲಿ ಪ್ರತಿನಿತ್ಯವೂ ಜನಮನವಂಚನಯು ಯಾವುದಾದರೂ ಒಂದು ಪ್ರಕರಣವನ್ನು ಸರಕಾರ ತೆರೆಯುತ್ತಲೇ ಇರುತ್ತದೆ! ಅಲ್ಲದಿದ್ದರೆ ವಿಚಾರಣಯನ್ನು ಸರಸರ ಅಂತ ಮುಗಿಸಿ ಅಧ್ಯಾಯ ಮುಕ್ತಾಯವಾಯಿತು ಎನ್ನಿಸಬಾರದಾಗಿತ್ತೇ? ಹೊಟ್ಟಗಿಲ್ಲದ ಕಾಲದಲ್ಲಿ ಸರಕಾರ ಘಟೋತ್ಕಚನ ಮಾಯಾಬಜಾರ ತೋರಿಸುತ್ತಿರುವುದೇನು?

ಗಾರುಡಿಗನು ನಾನೂದುವ ಪುಂಗಿಗೆ
　　ಬಾರದ ಹಾವುಂಟೇ ?
ಸಾರಾಸಾರ ವಿಚಾರವ ಮರಸುವ
　　ಸ್ವರ ಬೇರೊಂದುಟೇ ?
ಪಂಚಾಂಗವ ತೋರಿಸುವ ಸಿನೆಮಾ
　　ತಾರೆಗೆ ಸೋಲುಂಟೇ ?
ಪಂಚಪ್ರಾಣಗಳನ್ನೂ ಕೊಂಬ ಕು-
　　ಬೇರನಿಗೆದುರುಂಟೆ ?
ಹೊಟ್ಟೆಯ ದುಳ್ಳುರಿ ಮರೆಯಲು ಎರಡೇ
　　ಎರಡು ಉಪಾಯಗಳು
ಮುಟ್ಟದೆ ಲಕ್ಷ್ಯವ ಸೆಳೆಯುವ ನಾಟಕ,
　　ಮತ್ತಡವಿಯ ಬಾಳು !
ನೀತಿಯನಾವುದು ಘಾತಿಸುವುದೊ ಆ
　　ನಿರ್ಲಜ್ಜೆಯೆ ಚಂದ !
ನೀತಿಯಬಣ್ಣಿಸಿ ಬೇಳೆಯ ಬೇಯಿಸಿ
　　ಕೊಳ್ಳದ ನರ ಮಂದ !
ಸೀರೆಗೆ ಸಾವಿರ ಕುಬಸಕೆ ಕೋಟಿ, ಹೃ-
　　ದಂತರ್ಗುಹೆಯಲ್ಲಿ
ತೋರಿಯು ತೋರದೆ ಗಲಿಬಿಲಿಯಾಡುವ
　　ಪ್ರೇಮಕೆರಡು ಬಿಲ್ಲಿ !

ಸರಕಾರದ ದೌಲತ್ತಿಗೆ ಕೋರ್ಟಿನ
ಅಬ್ಬರವೇ ಸಾಕು—
ತರಕಾರಿಯ ಸತಿಗೊಯ್ದೀಯಲು ದು-
ಡ್ಡಿರದವಗದೆ ಬೇಕು!

❁ ❁ ❁ ❁

ಅಮೇರಿಕದ ಗಂಡಸರಿಗೆ ರಶಿಯದ ಗ್ರಾಮಿಕೋ ಅವರನ್ನು ಕಂಡರೆ ಆಗುವುದಿಲ್ಲವಂತೆ ಆದರೆ ಹೆಂಗಸರು ಅವರ ಗಂಡುತನವನ್ನು ನೋಡಿ ಮೆಚ್ಚಿಕೊಂಡಿರುವರಂತೆ ಇದರಿಂದ ಒಬ್ಬ ಹೇಳುತ್ತಾನೆ—ಅಮೇರಿಕಕ್ಕೆ ನಾಳೆ ಹೆಂಗನೊಬ್ಬಳು ಅಧ್ಯಕ್ಷೆಯಾದರೆ ಅಮೇರಿಕ ಮತ್ತು ರಶಿಯಗಳ ಲ್ಲಿಯ ವೈಷಮ್ಯ ಹೋಗಿ ಸ್ನೇಹ ಬೆಳೆಯಬಹುದು—ಎಂದು ಭೇಷ್ ಎನ್ನಬೇಕಲ್ಲವೇ ಈ ಸಲಹೆಗೆ? ಕೆಲವು ಸಮಾಜಗಳಲ್ಲಿ ಗಂಡಸರು ಕೃಪಣರೂ ದಯಾಹೀನರೂ ವ್ಯಾಪಾರಿಬುದ್ಧಿಯವರೂ ಇದ್ದರೆ, ಹೆಂಗಸರು ಉದಾರಿಗಳೂ ದಯಾವತಿಯರೂ ಧಾರ್ಮಿಕಬುದ್ಧಿಯವರೂ ಇರುವುದು ಉಂಟು ಇದು ಆಯಾ ಸಮಾಜದಲ್ಲಿ ಆಯಾ ಸ್ತ್ರೀ-ಪುರುಷರು ತಮ್ಮ ಕುಟುಂಬದ ಜೀವನದಲ್ಲಿ ಮಾಡಿಕೊಂಡ ಕರ್ಮವಿಭಜನೆಯ ಫಲವಾಗಿ ಅವರ ಸ್ವಭಾವ ಮತ್ತು ನಡತೆಗಳು ಬಹುಕಾಲದಲ್ಲಿ ಹೀಗೆ ವಿರುದ್ಧರೂಪಕ್ಕೆ ತಿರುಗಿದ್ದು ಸಹಜವಾಗಿದೆ ಅಮೇರಿಕದಲ್ಲಿ ಗಂಡಸರು ದುಡ್ಡನ್ನು ಗಳಿಸುವ ಯಂತ್ರಗಳೂ ಕಲಹಪ್ರಿಯರೂ ಹೆಣ್ಣಿನಾಳುಗಳೂ ಆಗಿದ್ದರೆ ಹೆಂಗಸರು ಗಂಡನಿಂದ ದುಡ್ಡು ಕಸಿದುಕೊಂಬವರೂ, ನಿರುಪಯೋಗಿಗಳೂ, ಶೀಲ ಭ್ರಷ್ಟರೂ, ಗುರಿಯಿಲ್ಲದವರೂ, ಸ್ವಾರ್ಥಿಗಳೂ ಆಗಿದ್ದಾರೆ ಇದಕ್ಕೆ ಕಾರಖಾನೆಗಳು ಹೆಚ್ಚಾಗಿ, ಜನರಲ್ಲಿ ಸೋಮಾರಿತನ, ಸುಖಲೋಲುಪತೆ ಹೆಚ್ಚಾದುದೇ ಕಾರಣ. ಮೇಲಿನ ವಾಕ್ಯದಿಂದ ಅವರೊಳಗೇ ಹೆಂಗಸರು ಉತ್ತಮ ಎನ್ನುವಂತಿದೆ ಪರೀಕ್ಷಿಸಿದರೆ ತದ್ವಿರುದ್ಧವಾದರೂ ಆಗಬಹುದು. ಹೇಗೇ ಆಗಲಿ ಒಂದುಸಲ ನೋಡುವುದು ಉತ್ತಮವಲ್ಲವೆ?

ಹೆಣ್ಣು ಗಂಡಾಗಬಯಸಿ
ಆದಳೋ-ಎರಡು ತಾನಲ್ಲವಾಗಿ;
ಗಂಡು ಹೆಣ್ಣಾಳ್ಕೆಗೆಳಸಿ

ಹೋದನೋ–ಹೆಣ್ಣಿಗೂ ಹೀನವಾಗಿ !
ಹೆಂಗೆಲಸ ಮಾಡಹೋಗಿ
ಗಂಡು ತಾ–ಎರಡನ್ನು ಮಾಡದಾದ,
ಗಂಡುಗೈಮೆಯಲಿ ನುಗ್ಗಿ
ಹೆಣ್ಣು ತಾ–ಮಾಡಲೋ ತನ್ನದನ್ನೂ !
ಬಾಲಸಂತಾಗ ಹೋಗಿ
ನಾಯಿ ನಾ–ಯಾಗಿಯೂ ಉಳಿಯಲಿಲ್ಲ,
ಬಾಲ ನಾಯಾಗ ಹೋಗಿ
ಬಾಲ ತಾ–ನಾಗಿಯೂ ಬಾಳಲಿಲ್ಲ !
ಕಣ್ಣು ಕೈಯಾಗಲೆಳಸಿ
ಕಾಣಲೂ–ಇಲ್ಲ, ಕೈ ಹಿಡಿಯಲಿಲ್ಲ,
ಕೈಯು ಕಣ್ಣಾಗ ಹೋಗಿ
ಹಿಡಿಯಲೂ–ಇಲ್ಲ ಕಂಗಾಣಲಿಲ್ಲ !
ನರ ದೇವನಾಗಬಯಸಿ
ದೇವನೂ–ಅಲ್ಲ ನರನಲ್ಲವಾದ,
ದೇವ ನರನಾಗಲೆಳಸಿ
ದೇವನೂ–ಅಲ್ಲ ನರನಲ್ಲವಾದ !
ಕವಿ ಕತೆಯ ಬರೆಯ ಹೋಗಿ
ಕಾವ್ಯವೂ–ಅಲ್ಲ, ಕತೆಯಲ್ಲವಾಯ್ತು'
ಹುಲಿ ಹಲ್ಲುಗಳಿಪುಕೊಂಡು
ಹಸುವನೂ–ಹುಲ್ಲನೂ ತಿನ್ನದಾಯ್ತು !
ಬಾಲ ತಲೆಯಾಗದೆಂದೂ
ತಲೆ ಬಾಲ–ವಾಗದೊ ಆಗದೆಂದೂ,
ಕಾಲು ಮೇಲಾಗಿ ನಡೆಯೆ
ಮೇಲು ಕೆಳ–ಗಾಗದೋ ಆಗದೆಂದೂ !

  

ಹಿಂದುಸ್ಥಾನಕ್ಕಿಂದು ಅಂತಾರಾಷ್ಟ್ರೀಯ ಭೀತಿಯ ಭೂತ ಬಡಿದು ಕೊಂಡಿದೆ ಒಮ್ಮೆ ಒಬ್ಬನಿಗೆ ಮಲೆನಾಡಿಗೆ ಹೋದರೆ ಜ್ವರ ಬರುತ್ತದೆ ಎಂಬ ಹೆದರಿಕೆಯಿತ್ತಂತೆ ಆಗ ಅವನು ಸರಕಾರೀ ನೌಕರನಾದುದರಿಂದ ವರ್ಗವಾದಾಗ ಹೋಗಲೇಬೇಕಾಗಿ ಬಂತು ಹೋಗುವ ಹಿಂದಿನ ದಿನ ಬೆಂಗಳೂರಲ್ಲಿ ತನ್ನ ಮನೆಯ ಕೊರಡಿಯಲ್ಲಿ ಅದೇ ಯೋಚನೆಯಲ್ಲಿ ಮಲ ಗಿದ ರಾತ್ರಿಯೇ ಜ್ವರ ಬಂದಿತು ನೆಹರೂ ಸರಕಾರಕ್ಕೀಗ ಇಂಥದೇ ಜ್ವರ ಬಂದು ಬಿಟ್ಟಿದೆ ಇರದಿದ್ದರೆ ಹೈದರಾಬಾದಿನ ನಿಜಾಮನ ದೂತರ ಹಾವಳಿಯನ್ನು ಇನ್ನೂ ಸಹಿಸಿಕೊಂಡು ಯಾರಾದರೂ ಬಿದ್ದಿರುತ್ತಿದ್ದರೇ ? ಅವನಿಗೇನು ? ಬಂದರೆ ಬೆಟ್ಟ, ಹೋದರೆ ಎಂಬಂತಿದೆ ಉಳಿದರೆ ಸಾರ್ವ ಭೌಮತ್ವ, ಹೋದರೆ ಒಕ್ಕೂಟದೊಡನೆ ಸೇರ್ಪಡೆ–ಇಷ್ಟೇ ಅಲ್ಲವೆ ? ಅವನಿಗೇನು ಮಹಾನಷ್ಟ ? ನೋಡೋಣ ಆದಷ್ಟು ಕಾಟಕೊಟ್ಟು ಎನ್ನು ತ್ತಾನೆ ಅವನಿಗೆ ಅವನ ಪದವಿಯೇ ಮುಖ್ಯ ಅವನ ಪ್ರಜೆಗಳು ವಿಧರ್ಮೀಯರು ಹಿಂದೀ ಒಕ್ಕೂಟ ವಿಧರ್ಮೀಯರದು ಇಬ್ಬರಿಗೂ ನಷ್ಟ ವಾದರೂ ಅವರಿಗೇನೂ ನಷ್ಟವಿಲ್ಲ, ಒಟ್ಟಿನಲ್ಲಿ ಆಸುರೀತೃಪ್ತಿಯೇ ! ಮಾಂಕ್ಟನ್ ಸಾಹೇಬನ ಕೈಯಲ್ಲಿ ಕೋಟಿಗಟ್ಟಲೆ ಕೊಟ್ಟು 'ತಮ್ಮಾ ಕೊಳ್ಳಲಿಕ್ಕೆ ಬರುವ ಎಲ್ಲ ಶಸ್ತ್ರಾಸ್ತ್ರಗಳನ್ನೂ ಕೊಳ್ಳಿ" ಎಂದು ತಣ್ಣಗೆ ಕುಳಿತಿದ್ದಾನೆ ರಜಾಕಾರರು ಬೇಟೆಗಾರ ನಾಯಿಗಳಂತೆ ನಿಜಾಮನ ವಿರುದ್ಧ ನಿಂತ ಎಲ್ಲರನ್ನೂ ಬೊಗಳಿ ಕಚ್ಚಿ ಯಥಾಶಕ್ತಿ ಕಿರುಕುಳ ಕೊಡು ತ್ತಿದ್ದಾರೆ ಇದು ಅವನಿಗೊಂದು ಮೋಜು ಹಿಂದೀ ಸರಕಾರ ಉಗುಳಿ ದರೆ ತುಪ್ಪ ಕೆಡುತ್ತದೆ, ನುಂಗಿದರೆ ಗಂಟಲು ಸುಡುತ್ತದೆ ಎಂದು ತನ್ನ ಕಟ್ಟಿನಲ್ಲೇ ತಾನು ಸಿಕ್ಕಿಕೊಂಡು ಒದ್ದಾಡುತ್ತಿದೆ ! ಅಯ್ಯೋ ಫಜೀತಿಯೇ ! ಇದಕ್ಕೆ ನಗಬೇಕೋ ಅಳಬೇಕೋ ತಿಳಿಯುವುದಿಲ್ಲ ಸ್ವಯಂ ಮಹೇಶ, ಮಾವ ನಗೇಶ, ಗೆಳೆಯ ಧನೇಶ, ಮಗ ಗಣೇಶ, ಹೀಗಿದ್ದರೂ ಶಿವ ಭಿಕ್ಷೆ ಬೇಡಬೇಕಾಗಿ ಬಂತಂತೆ ಬ್ರಹ್ಮಕಪಾಲ ಹಿಡಿದಾಗ ದಿಲ್ಲಿ ಸರಕಾರದ ಕತೆ ಇಂಥದೇ !

ಹೋತನ ಕೊರಳಲಿ ಮೊಲೆಯುಂಟು,
ಹಿಂಡಲು ಹಾಲಿಲ್ಲ,

ಕೋತಿಯ ತಲೆಯಲಿ ಮಿದುಳುಂಟು
ಆದರೆ ಮತಿಯಿಲ್ಲ
ಕುರ್ಚಿಗೆ ಕಾಲ್ಗಳು ನಾಲ್ಕುಂಟು.
ನಡೆಯಲು ಬರದಲ್ಲ,
ಕನ್ನಡಿಯೊಳಗಡೆ ಗಂಟುಂಟು
ತೆಗೆಯಲು ಬರದಲ್ಲ,
ಚಂದ್ರಾನನೆ ಮನೆಯೊಳಗಿದ್ದೂ
ಕತ್ತಲು ಹರಿದಿಲ್ಲ,
ಹೇಡಿಗೆ ಕೈಯಲಿ ಕೋಲಿದ್ದೂ
ಹೊಡೆಯಲು ಬರದಲ್ಲ!
ರೇಶನ್ ಕಾಲದಿ ದುಡ್ಡಿದ್ದೂ
ಕೊಳ್ಳಲು ಸಿಗಲಿಲ್ಲ,
ಹಿಂದುಸ್ತಾನಕೆ ಬಲವಿದ್ದೂ
ಹಗೆಯನು ಸೋಲಿಸಲೆಡೆಯಿಲ್ಲ!
ಕೈಹಿಡಿದಾಕೆಗೆ ಒಲವಿದ್ದೂ
ಒಲಿಸಲು ಬಲವಿಲ್ಲ,
ಒಲಿದವನಿಗೆ ಹೆದ್ದಲೆಯಿದ್ದೂ
ಕಲಿಸುವ ಭಾಗ್ಯವೆ ಇಲ್ಲಲ್ಲ!

ಸಂಯುಕ್ತರಾಷ್ಟ್ರ ಸಂಘದಿಂದ ಸದಿಚ್ಛಾ ಮಂಡಲವೊಂದು ಕಾಶ್ಮೀರಕ್ಕೆ ಬಂದಿದೆ. ಪಾಕಿಸ್ತಾನ ಹಿಂದುಸ್ತಾನಗಳೆರಡೂ ಅದರ ಅಭಿಪ್ರಾಯವನ್ನು ಎಂದೋ ವಿರೋಧಿಸಿವೆ ಆದರೂ ವಿಶಾಸೆ ಹೊಕ್ಕರೆ ಸಾಕೆಂಬ ಬೆಕ್ಕಿನಂತೆ ಆ ಮಂದಿ ಭಾರತಕ್ಕೆ ಬಂದಿದ್ದಾರೆ ಕಾಶ್ಮೀರವನ್ನು ಎರಡು ಮಾಡಿ ನ್ಯಾಯದಾನ ಮಾಡಿ ಬಿಟ್ಟಿದ್ದೇವೆ ಎಂದು ಜಂಭ ಹೊಡೆಯಬೇಕೆಂಬುದೇ ಈ ಕಂಕನರಿಗಳ ಅಂತರ್ಯ ಆದರೆ ನೆಹರು ಸರಕಾರ ಕಾಶ್ಮೀರದ ವಿಷಯ ವಲ್ಲೇನೋ ಗಟ್ಟಿಹಿಡಿದು ಕುಳಿತಿದೆ ಆ ಗಟ್ಟಿತನ ಮತಗಣನೆಯಲ್ಲಿ ಹಾರಿಹೋದೀತೆಂಬ ಹೆದರಿಕೆ ಇನ್ನೂ ಪೂರ ಹೋಗಿಲ್ಲ. ಮತಗಣನೆ

ಯುಂಬುದು ದಿಲ್ಲಿ ಸರಕಾರ ತನಗೆ ತಾನೇ ಹಾಕಿಕೊಂಡ ಕೋಳ ವ್ಯಕ್ತಿ ನೀತಿ ರಾಜನೀತಿಗಳು ಒಂದೇ ಎಂದು ಗಾಂಧಿ ತಮ್ಮನ್ನು ಬಲಿಕೊಟ್ಟು ಕೊಂಡರು ನೆಹರು ಅದೇ ಜಾತಿಯ ಮನುಷ್ಯ ಏನು ಮಾಡಲಿರುವ ರೆಂಬುದು ಸಂಶಯಾಸ್ಪದ ವ್ಯಕ್ತಿಯಾದ ಸೀತೆಗೋಸ್ಕರ ರಾಮನು ರಾಜ್ಯವನ್ನು ಮಾರಿಕೊಳ್ಳಲಿಲ್ಲ ಆದರೆ ನೆಹರು ತನ್ನ ಇಷ್ಟಕ್ಕಾಗಿ ಕಾಶ್ಮೀರದಲ್ಲಿ ಹಣ ಸುರಿದಿದ್ದಾರೆ, ಸೈನ್ಯ ಕಳಿಸಿದ್ದಾರೆ ಉಳಿದರೆ ಮರ್ಯಾದೆ ಉಳಿದ ಹಾಗೆ ಇಲ್ಲದಿದ್ದರೆ ಹೋದ ಹಾಗೆಯೇ ಕಡೆಗೂ ಹೀಗೆಂದರು ಯಾರೋ ಅಂತ ಹೇಳಿದರೆ ಸೀತೆಯನ್ನು ಬಿಟ್ಟಂತೆ ಕೈಗೆ ಬಂದ ಕಾಶ್ಮೀರವನ್ನು ಬಿಟ್ಟುಬಿಡುವರೋ ಏನೋ- ಯಾರಿಗೆ ಹೇಳಲು ಸಾಧ್ಯ?

ಉದಾತ್ತಚರಿತರು ನಾಯಕರಾದರೆ
    ಉದಾರನೀತಿಯ ಹಿಡಿಯುವರು
ಅವರನ್ನವಲಂಬಿಸಿದವರೆಲ್ಲರು
    ಹೆದ್ದಾರಿಯಲೇ ಬೀಳುವರು!
ಹಸುವಿನಂತೆ ಸುಮ್ಮನೆ ಹಾಲಿತ್ತರೆ
    ಯಂತ್ರಗಳನ್ನೇ ಹಚ್ಚುವರು,
ಹುಚ್ಚರಂತೆ ಹೋಯೆಂದರೆ ಹೊದ್ದಿಹ
    ಹಚ್ಚಡಕೇ ಕೈಹಚ್ಚುವರು!
ಪ್ರೀತಿಯ ಹುಡುಗನು ಪ್ರೀತಿಸಿದರ್ಕೆ ಅದು
    ಹುಚ್ಚಿನ್ನವಳಿಂದಿನ ಹುಡುಗಿ,
ಘಾತಿಸುವವರೇ ಘನವಂತರಲಾ,
    ನಮಿಸುವಳಂಥವರಿಗೆ ನಡುಗಿ!
ಹೆಣವಿದ್ದಲ್ಲಿಗೆ ಹದ್ದೆಯ್ತರುವುದು,
    ರಣವಿದ್ದಲ್ಲಿಗೆ ರಣಮಾರಿ,
ಹಣವಿದ್ದಲ್ಲಿಗೆ ಬೆಡಗಿಯರೆಲ್ಲರು
    ಬರುವರಿದೇ ನಿತ್ಯದ ದಾರಿ!
ಹಾರುವುದೆಲ್ಲಾ ಹಕ್ಕಿಯು ಎಂದೇ
    ತಿಳಿವನು ಕೋವಿಯ ಹಿಡಿದಾತ,

ಹಿಂದುಗಳೆಲ್ಲಾ ಹೇಡಿಗಳೆಂಬನು
ಪಾಕಿಸ್ತಾನಕೆ ನಡೆದಾತ !
ಅಯ್ಯೋ ಎಂದವಗಾರೇ ತಿಂಗಳು,
ಎಲ್ಲರು ಆತನ ಕೊಲ್ಲುವರು,
ಹುಯ್ಯೋ ಎಂದರಚುವ ಕೇಡಿಗಳಿಗೆ
ಎಲ್ಲರು ನೆರವನ್ನೀಯುವರು !
ಖೂಸೆಯ ಸುಟ್ಟರೆ ಬೆಕ್ಕನು ಗೆಲಬಹು
ಪಾಸೆಯ ಸುಟ್ಟರೆ ಬಂಧನವ,
ಯಜಮಾನನ ಬಗ್ಗಿಸಿದರೆ ಬಗ್ಗಿಸ
ಬಹುಪಾತನ ಬಳಗದ ಬಲವ !

ಸ್ತ್ರೀಯರ ಸ್ವಾತಂತ್ರ್ಯ ಮತ್ತು ಹಿಂದುಳಿದವರ ಏಳಿಗೆ ಇವುಗಳ ಬಗ್ಗೆ ಬಹಳ ಮಾತು ಕೇಳಿಬರುತ್ತದೆ ಇದು ರಾಜಕೀಯವಲ್ಲ ಸಾಮಾಜಿಕ, ಸಾಂಸ್ಕೃತಿಕ ರಾಜಕೀಯ ಸ್ವಾತಂತ್ರ್ಯವನ್ನು ದೇಹಬಲ, ಕಾಯದೆ ಬಲಗಳಿಂದ ಪಡೆದಂತೆ ಇದನ್ನು ಪಡೆಯಬಹುದೆಂದು ಕಲವರ ತಿಳಿವಳಿಕೆಯಿದೆ ಅದರಿಂದಲೇ ಹೆಂಗಸರಿಂದು ಆರ್ಥಿಕ ಸ್ವಾತಂತ್ರ್ಯದ ಹೆಸರಿನಲ್ಲಿ ಕೂಲಿಮಾಡಲು (ನೌಕರಿ ಚಾಕರಿ ಹುಡುಕಲು—ಗಂಡನ ದಾಸ್ಯಕ್ಕಿಂತ ಅನ್ಯದಾಸ್ಯವೇ ಲೇಸೆಂದು) ಹೊರಟಿದ್ದಾರೆ ಅಧಿಕಾರಲಾಲಸೆಯಿಂದ ಹಿಂದುಳಿದ ವರ್ಗದವರೂ ನೌಕರಿ ಮಾಡಲು ಹತ್ತಿ ವ್ಯಾಪಾರ, ಕೃಷಿ, ಕೈಗಾರಿಕೆಗಳನ್ನು ಬಿಟ್ಟು ಬಡಬ್ರಾಹ್ಮಣರಾಗಲು ತೊಡಗಿದ್ದಾರೆ ಇದು ಕಾಲಗುಣವೋ ನಿಂದ ನೆಲದ ಗುಣವೋ ಎಂದು ನನ್ನ ಬಡಶಿಷ್ಯೆ ಸಂಗಮ್ಮ ಕೇಳುತ್ತಾಳೆ ಏನನ್ನಬೇಕು ಇದು ಕಾಲಗುಣವೂ ಅಲ್ಲ, ನೆಲದ ಗುಣವೂ ಅಲ್ಲ ಮೆದುಳಿನಗುಣ! ದಾಸ್ಯವಿರುವುದು ಹೃದಯದಲ್ಲಿ ಹೆಂಗಸಿಗೆ, ಬುದ್ಧಿಯಲ್ಲಿ ಹಿಂದುಳಿದವರಿಗೆ. ಒಬ್ಬಳಿಗೆ ರೂಪದಾಸ್ಯ, ಮತ್ತೊಬ್ಬರಿಗೆ ಧನದಾಸ್ಯ ಈ ದಾಸ್ಯಕ್ಕೆ ಆಳಾಗಿ ಅವರೀಗ ಮತ್ತೊಂದು ಗುರುತರ ದಾಸ್ಯಕ್ಕೆ ಕೈಯೊಡ್ಡಿ ನಿಂದಿದ್ದಾರೆ: ಅಧಿಕಾರದಾಸ್ಯ ಅದು ಅದಕ್ಕೇ ನಮ್ಮ ಸಂಗನ ಬಸವನೆಂದ-

ಆನೆಬೇಕು ಎಂದು ಬಯಸಿ
ಹಾರುವಯ್ಯ ದಾನ ಹಿಡಿದ,
ಸಾಕಲಾರದಾಗಿ ರಾಜ
ಭಟರಿಗಿತ್ತು ಕಳೆದುಕೊಂಡ !
ನಾಯಿಬೇಕು ಎಂದು ಭಟ್ಟ
ಕೊಂಡುಕೊಂಡು ಸಾಕಹೋದ;
ಸ್ನಾನಮಾಡಿ ಬಂದಮೇಲೆ
ತೋರಬಂತು ತನ್ನ ಲೀಲೆ ! ॥೨॥
ಬೆಕ್ಕು ನಾಯಿ ಹಾಗೆ ಕೂಗಿ
ಹಿಂಡುತಪ್ಪಿ ಸೊರಗಿತು,
ನಾಯಿಗಳಲಿ ಸಿಕ್ಕಿಬಿದ್ದು
ಸಾವವರೆಗೆ ಕೊರಗಿತು !
ನಾಯಿ ಬೆಕ್ಕಿನಾಟವಾಡಿ
ನಾಯಿ ಅಲ್ಲವಾಯಿತು,
ಬೆಕ್ಕು ಪರಚಿದಾಗ ನೊಂದು
ಅತ್ತು ಸತ್ತುಹೋಯಿತು ! ॥೩॥
ಹಲ್ಲುಬಿಡುವ ಹುಡುಗ ಚೆಂದ-
ವೆಂದು ಮದುವೆಯಾದ ಹುಡುಗಿ
ಸಾವಕಾಲದಲ್ಲಿ ಕೂಡ
ಹಲ್ಲುಬಿಡಲು ನೊಂದಳು,
ತಾನು ಹುಚ್ಚಿಯಾದಳು !
ಎದೆಯ ನೀಡಿ ತಿರುಗುವಂಥ
ಹುಡುಗಿ ಚೆಂದವೆಂದ ಹುಡುಗ,
ಸಾಯುವಾಗ ಕೂಡ ಗಂಡು,
ಎದೆಯ ಚಾಚಿ ನಿಲ್ಲಲು-
ಬೇಗ ಸಾವೆನೆಂದನು !
ಕಾಲ ಮೇಲೆ ಕಾಲುಹಾಕಿ

ಕುಳಿತ ಸೆಟ್ಟಿಗೆ
ಮಾಲು ಉಳಿಯೆ ರೊಕ್ಕವಿಲ್ಲ-
ವಾಯ್ತು ಹಿಟ್ಟಿಗೆ!
ಬಾಲ ಬೇಡವೆಂದ ಮಂಗ
ಬಾಳಲಾರದು,
ಮೀಸೆ ಬೇಡವೆಂದ ಗಂಡು
ಆಳಲಾರದು!

ವಿದ್ಯಾಭ್ಯಾಸ, ವಿದ್ಯಾಭ್ಯಾಸ—ಎಲ್ಲಿ ಕೇಳಿದರೂ ಇದೇ ಮಾತು. ಏನಪಾ ವಿದ್ಯಾಭ್ಯಾಸ ಅಂದರೆ? ಅಂತ ಕೇಳಿದರೆ ಉತ್ತರ ಹೇಳುವವರು ಬಹಳ ಜನ ಸಿಗಲಿಕ್ಕಿಲ್ಲ. ಅಪಪ್ರಚಾರ, ಡಿಗ್ರಿದಾನ, ಸಾಮಾನ್ಯ ಜ್ಞಾನ ಪ್ರಸರಣ, ರೇಡಿಯೋ ಪ್ರಚಾರ, ಭಾಷಣೌಷಧ ಪ್ರಯೋಗ—ಇತ್ಯಾದಿಗಳಿಂದ ದಡ್ಡರನ್ನು ವಿದ್ಯಾವಂತರನ್ನಾಗಿ ಮಾಡುವ ಹುಚ್ಚೊಂದು ಎಲ್ಲೆಲ್ಲೂ ಹರಡಿಹೋಗಿದೆ. ಹುಚ್ಚೆಂದ ಕೂಡಲೆ ಯಾರೂ ಸಿಟ್ಟಿಗೇಳಕೂಡದು—ಶಿಷ್ಯರೇ ಎಚ್ಚರಿಕೆ. ವಿದ್ಯಾಭ್ಯಾಸದ ಮುಖ್ಯ ಗುರಿ ಗುಣಶೀಲರೂಪಣ ಎಂದು ಪಠ್ಯ ಪುಸ್ತಕಗಳಲ್ಲಿ ಬರೆದಿಡಲಾಗಿದೆಯೆಂಬುದನ್ನು ಬಲ್ಲವರು, ಅದು ಪುಸ್ತಕಗಳಿಂದ ಕಲಿವ ಜ್ಞಾನವಲ್ಲ, ಸತ್ಸಹವಾಸದಿಂದ ಗಳಿಸಿಕೊಂಬ ಒಂದು ಮಾಧುರ್ಯ ಎಂಬುದನ್ನು ತಿಳಿಯಲಾರರೇ? ಗುರುವಿನಂತೆ ಶಿಷ್ಯ, ಶಿಷ್ಯನ ಅಪ್ಪ ಇಲ್ಲವೆ ಸರಕಾರ ಕೊಡುವ ಸಂಬಳ ಮತ್ತು ಮರ್ಯಾದೆಗಳಿಗನುಗುಣವಾಗಿ ಗುರು ಇರುವುದು ಸ್ವಾಭಾವಿಕವಿರುವಂತೆ ತದನುಗುಣವಾಗಿ ಗುರು ತೋರುವ ವಿದ್ಯೆ, ಶಿಷ್ಯ ತೆಗೆದುಕೊಂಬ ಜ್ಞಾನ ಎರಡೂ ಒಂದೇ ಮಾರ್ಗ ಹಿಡಿಯುವುವು.

ಕಾಸಿಗ ಕೊಸರಿಗೆ ಕುರುಡಕ್ಷರಗಳ
ಕಲಿಸುವನು-ಗುರು-ನಲಿಸುವನು।
ಹಾಸಿಗೆಯಿಂದೇಳದ ಹೆಮ್ಮಕ್ಕಳ
ಒಲಿಸುವನು-ಬಾಯ್-ಸಲಿಸುವನು! ||೧||
ರಾಮಾ ಚಾಪೆಯ ಹಾಕೆಂದರಗಿಳ

ಕಲಿಯುವುದು-ಕಲಿತುಲಿಯುವುದು!
ಗ್ರಾಮೋಫೋನಿನ ಹಾಗೇ ಮಕ್ಕಳು
ಹಾಡುವರು-ಕುಣಿ-ದಾಡುವರು! ॥೨॥
ಕಲಿಯುಗದಲಿ ಬಲ್ಲುಲಿಯೇ ಕಲಿತನ,
ಬೊಗಳುವುದೇ-ನಿಜ ಹೊಗಳುವುದು!
ಇಲಿಯೋ ಹುಲಿಯೆಂದೆಂಬುದು ಕೋಶವು,
ಕಾಲುತಲೆ-ತಲೆ-ಕಾಲಹುದು! ॥೩॥
ಮಾನಸ ಶಾಸ್ತ್ರಜ್ಞರು ನಗುವುದಕಳು
ಎನ್ನುವರು-ತಲೆ-ತಿನ್ನುವರು,
ತೋರಿಸಿ ಬಣ್ಣವ ತೊಗಲಿನ ತಿಣ್ಣವ
ಸೂಳೆಯರು-ಹಣ-ಕೇಳುವರು! ॥೪॥
ಸಾಕ್ಷರ ರಾಕ್ಷಸರಾಟಂಬಾಂಬನು
ಎಸೆಯುವರು-ಹಲ್-ಮಸೆಯುವರು!
ದ್ರಾಕ್ಷಾರಸವೇ ನವರಸವೆಂದದೊ
ಕುಡಿಯುವರು-ಮೋಜ್-ಮಡಿಯುವರು ॥೫॥
ಬಟ್ಟೆಯನೆಸೆಯುವ ಬಟ್ಟೆಯಹಿಡಿಯುವ
ತಾರೆಯರೇ-ಗಂ-ಭೀರೆಯರು!
ಮತ್ತವರಿಂದಲೆ ಹಣ ಗಳಿಸುವ ನರ
ಲಕ್ಷ್ಮೀಧರ-ಸ-ನ್ಮಾನ್ಯವರ!

* * * *

ನನ್ನ ಗುರುಗಳು ಹೇಳುತ್ತಿದ್ದರು ಒಂದು ಸಲ ಒಬ್ಬನಿಗೆ ಒಬ್ಬ ಹೇಳಿದನಂತೆ—'ನನಗೆ ಕಾಲೇಜಿನಲ್ಲಿದ್ದಾಗ ಎರಡು ವಿಷಯದಲ್ಲಿ ಪಾರಿತೋಷಕ ಸಿಕ್ಕಿದೆ, ಒಂದನೆಯದು ನನ್ನ ಅದ್ಭುತವಾದ ಸ್ಮರಣಶಕ್ತಿ, ಎರಡನೆಯದು ಯಾವುದೆಂಬುದು ನೆನಪೇ ಆಗುವುದಿಲ್ಲ' ಎಂದು. ಹೀಗಾಯಿತು ನಮ್ಮ ಸಿದ್ಧಲಿಂಗನ ಹೆಂಡತಿಯ ಕತೆ. ಹೆಂಡತಿ ತವರು ಮನೆಗೆ ಹೋದಾಗ ಸಿದ್ಧಲಿಂಗ ಕಾಗದ ಬರೆದನಂತೆ-'ನೀನು ಓದುಬರಹ ಚನ್ನಾಗಿ ಕಲಿತುಕೊಳ್ಳಬೇಕು. ಹಾಗೆ ಮಾಡುವೆನೆಂದು ವಚನಕೊಡು; ಮುಂದಿನ

ಕಾಗದದ ಜೊತಗೆ ಗದ್ಯ ಪ್ರಬಂಧವೊಂದನ್ನು ಬರೆದು ಕಳುಹಿಸು' ಎಂದ-ಮರುಟಪ್ಪಾಲಿಗೆ ಉತ್ತರ ಬಂತು—'ನೀನು ಹೇಳಿದಂತೆಯೇ ಮಾಡುತ್ತೇನೆಂದು ಭಾಷೆ ಕೊಡುತ್ತೇನೆ' ಎಂದು ಆ ಕಾಗದದಲ್ಲಿ ಬರಿಯ ಭಾಷೆಯಲ್ಲದೆ ಪ್ರಬಂಧವೇ ಅದರ ಜೊತೆಗಿರಲಿಲ್ಲ!

ಭಾಷೆಕೊಡುವುದೇ ಭಾಷೆ ಮುರಿಯಲಿಕೆ
ಬೆಳೆಯು ಅಳಿಯುವುದಕೆ।
ಶಾಸನಂಗಳನು ವಿಧಿಸುವುದೇತಕೆ?
ಮುರಿದು ಹಾಕುವುದಕೆ॥
ಬೇಲಿಹಾಕುವುದು ದನವು ದಾಟಲಿಕೆ,
ಬೀಜ ಹುಳಕೆ ತಿನಲು।
ಮದುವೆಯಾಗುವುದು ಜಗಳವಾಡಲಿಕೆ,
ಮಾನ ಕಳೆದುಕೊಳಲು॥
ಬಟ್ಟೆಹಾಕುವುದು ಜನವನೋಹಿಸಲು,
ಹೊಟ್ಟೆ ತುಂಬಿಸುವುದು।
ಮೋಸ ಹೊಂದದವರನ್ನು ಶಿಕ್ಷಿಸಲು
ಶಕ್ತಿಪಡೆಯಲಹುದು॥

• • • •

ಹಿಂದೂ ಧರ್ಮ ಅಂತ ಒಂದಿದೆ ಅದರಲ್ಲಿ ಒಬ್ಬನನ್ನು ಬಹಿಷ್ಕರಿಸಲು ನೂರಾರು ಧರ್ಮಸೂತ್ರಗಳಿವೆ. ಆದರೆ ಪತಿತರನ್ನೇ ಪುನರುದ್ಧಾರ ಮಾಡಿ ಮೇಲೆತ್ತಿ ಸ್ವಸ್ಥಾನ ಕೊಡಲು ಯಾವ ಅನುಕೂಲ ಸೂತ್ರವೂ ಇಲ್ಲವೆಂಬುದನ್ನು ನಮ್ಮ ಬಸವಣ್ಣಪ್ಪ ಇದಿರಿಗೆಳೆದ. ಅದೇಕೆ ಬಂತೆಂದರೆ, ಮುಸಲ್ಮಾನರು ಧರ್ಮಾಂಧರು ಎಂದು ಒಬ್ಬ ಎಂದುದಕ್ಕೆ ಹಿಂದುಗಳೇನು ಕಡಿಮೆ ಧರ್ಮಾಂಧರೇನು, ಬಲಾತ್ಕಾರದಿಂದ ಅಪಹೃತಳಾದ ಕನ್ಯೆಯೊಬ್ಬಳನ್ನು, ಅವಳ ಅಪ್ಪ ಅಮ್ಮ ಮನೆಗೆ ಬಂದರೆ ಪುನಃ ಸ್ವೀಕಾರ ಮಾಡಲೊಲ್ಲವೆಂದ ಉದಾಹರಣೆಯನ್ನು ಮತೊಬ್ಬ'ಕೊಟ್ಟ. ಧರ್ಮಬುದ್ಧಿ ಪ್ರೀತಿಯನ್ನು, ವಾತ್ಸಲ್ಯವನ್ನು, ರಕ್ತ ಸಂಬಂಧವನ್ನು, ಕರುಳನ್ನು, ಕರುಣವನ್ನು, ಕೊಲ್ಲಬಹುದಾದರೆ ಅದಕ್ಕೆ ಧರ್ಮಬುದ್ಧಿಯೆನ್ನ ಬೇಕೋ-

ಧರ್ಮದಾಸ್ಯ, ಸಮಾಜದ ಅಂಜಿಕೆ ಸ್ವಾರ್ಥ ಎನ್ನಬೇಕೋ? ಸ್ವರಕ್ಷಣ ಪ್ರಾಣಿ ಸಹಜಧರ್ಮ ಮನುಷ್ಯ ಪ್ರಾಣಿಜೀವನಕ್ಕಿಂತ ಎತ್ತರ ಹೋಗಲಾರದವನಾದರೆ ಅವನಿಗೆ ಮನುಷ್ಯತ್ವವಿದೆಯೆನ್ನಲು ಸಾಧ್ಯವೆ? ಸಾಧ್ಯವಿಲ್ಲವೆಂದು ನಾನಾದರೂ ಒಪ್ಪಿಕೊಳ್ಳಬೇಕಾಯಿತು ಬೇರೆ ಗತಿಯೇ ಇಲ್ಲ ನಮ್ಮ ಶರಣ ಆಗಲೇ ಹೇಳಿಬಿಟ್ಟಿದ್ದಾನೆ—ಧರ್ಮದಾಸರ ದಂಡು, ಇಂದು ಜಾಡ್ಯದ ತಂಡು, ಕತ್ತರಿಸಿ ಕಡೆಗಂಡು, ಹುಟ್ಟಿಸೈ ಹೊಸದೊಂದು–ಎಂದು ಆ ನಾಗರಿಕತೆಯನ್ನು ಅಲಿಂಗಿಸಿದ ಧರ್ಮಪರಾಯಣತೆ ಹಳಸಿದ ವ್ಯವಹಾರವೆಂದು ಹೇಳಿದ ನಮ್ಮ ಗುರುಬಸವನ ಮಾತು ಸುಳ್ಳೆನ್ನಲಾದೀತೆ? ಗುರು ಹೇಳಿದ

ಅನ್ನಅನ್ನವಲ್ಲ ತಂಗುಳಾದಮೇಲೆ,
ಬೊಮ್ಮಬೊಮ್ಮನಲ್ಲ ಹುಟ್ಟಿಬಂದಮೇಲೆ,
ನಲ್ಲೆನಲ್ಲೆಯಲ್ಲ ಪರನಿಗೊಲಿದಮೇಲೆ,
ಬಣ್ಣಬಣ್ಣವಲ್ಲ ಕಪ್ಪಗಾದಮೇಲೆ !

ನಾಯಿಮುಟ್ಟಿದಂಥ ಮಡಕೆ ಶುದ್ಧವೇನು ?
ಸಾಯುವಂತೆ ಹೊಡೆದ ಗಂಡ ಕರುಣಿಯೇನು ?
ಪರರಿಗಂಜಿ ಮಗಳ ಬಿಸುಡೆ ಧರ್ಮವೇನು ?
ಸೇರಿಬರಲು ದೂರದೂಡೆ ಪ್ರೀತಿಯೇನು ?

ಸೆರಗನೆತ್ತಿನಡೆವ ಹೆಣ್ಣು ಗರತಿಯೇನು ?
ಕಂಡಹೆಣ್ಣು ಕಾಮಿಸುವವ ಗಂಡನೇನು ?
ಪತಿತರನ್ನುತುಳಿವ ಹೃದಯ ಹೃದಯವೇನು ?
ಕತೆಯಕೇಳಿ ಮರೆವ ಬುದ್ಧಿ ಬುದ್ಧಿಯೇನು ?

ತಾನೆ ಜಾಣನೆಂಬ ತರುಣ ದಡ್ಡಮಂಗ,
ತಾನೆ ಬೆಡಗಿಯೆಂಬವಳಿಗೆ ಮಾನಭಂಗ !
ತಾನೆ ಶುದ್ಧ ಎಂಬ ಜಾತಿ ದಾಸ್ಯದಾಳು,
ತಾವಶಕ್ತರೆಂಬವರಿಗೆ ನಿತ್ಯಗೋಳು !



೪೨ ನೆಯ ಇಸವಿಯಾರಂಭದಿಂದ ಭಾರತದಲ್ಲಿ ಪ್ರವಾಸವೆಂದರೆ ದೊಡ್ಡ ಪ್ರಯಾಸ, ಪ್ರಾಣಪ್ರಯಾಣಾವಸ್ಥೆಯನ್ನು ಅನುಭವಿಸಬೇಕು ಒಂದು ಪ್ರಯಾಣದಲ್ಲಿ ಎಂಟಾಣೆ ತೆಗೆದುಕೊಂಡು ಪೋರ್ಟರನೊಬ್ಬನು ನನ್ನನ್ನು ಗಂಟುಸಹಿತ ಗಾಡಿಯೊಳಗೆ ಒಗೆದು ಜಾಗಮಾಡಿ ಕೊಟ್ಟಿದ್ದನ್ನು ನಾನೆಂದೂ ಮರೆಯಲಾರೆ. ಇನ್ನೊಮ್ಮೆ ಒರಗುವ ಹಲಗೆಯ ಮೇಲ್ತುದಿಯಲ್ಲಿ ಒಕ್ಕಾಲಿನಿಂದ ನಿಂತೇ ೨೦೦ ಮೈಲುಗಳ ಪ್ರಯಾಣವನ್ನು ನೆರವೇರಿಸಿದ್ದು ಅವಿಸ್ಮರಣೀಯವಾಗಿದೆ ಕಿಕ್ಕಿರಿದು ನೆರೆದ ಗಾಡಿಯಲ್ಲಿ ಸಂಡಾಸಿನೆಡೆಗೆ ಹೋಗಲು ಅವಕಾಶವಿಲ್ಲದೆ ಕಿಟಕಿಯೊಳಗಿಂದ ಗಾಡಿನಿಂತಾಗ ಕೆಳಕ್ಕೆ ಹಾರಿ ಕನ್ನಡಕದ ಹರಳನ್ನು ತರಚಿಕೊಂಡದ್ದು ಐತಿಹಾಸಿಕ ಸತ್ಯವಾಗಿದೆ ಒಬ್ಬ ಹೆಣ್ಮಗಳಿಗೆ ತ್ರಾಸವುಂಟಾಗಿ ವಸ್ತ್ರಮಾಲಿನ್ಯ ಮಾಡಿಕೊಂಡ ಸಂಗತಿಯೂ ಚಿತ್ರಲಿಖಿತವಾಗಿದೆ

ಇಂಥದೇ ಒಂದು ಪ್ರವಾಸವನ್ನು ನಾನು ಮಾಡಿದೆ ಮೂವತ್ತಾರು ಜನರು ಕೂಡಬೇಕೆಂದಿದ್ದ ಕೋರಡಿಯಲ್ಲಿ ೮೫ ಜನರು ಕುಳಿತಿದ್ದರು ಭರತಖಂಡದ ಜನಸಂಖ್ಯೆಯ ವೈವಿಧ್ಯದ ಒಂದು ತುಣುಕನ್ನೇ ಅಲ್ಲಿ ಕಾಣಬಹುದಾಗಿತ್ತು ವೈಕುಂಠವಾಸಿಯಾದ ಶ್ರೀ ವಿಷ್ಣುಪರಮಾತ್ಮನು ದಶಾವತಾರಗಳಷ್ಟನ್ನೇ ಮಾಡಿದ್ದರೆ ಆ ಕೋರಡಿಯಲ್ಲಿಯ ಆ ಮನುಕುಲವು ಪಂಚಾಶೀತಿ ಅವತಾರಗಳನ್ನು ಮಾಡಿತ್ತು, ಎಂಬತ್ತೈದು ಜನರದ್ದು ಎಂಬತ್ತೈದು ಅವತಾರ! ಮತ್ಸ್ಯಾವತಾರಿಯಾದ ಒಂದು ಹುಡುಗಿ ನಾನು ಕುಳಿತ ಹಲಿಗೆಯ ಕೆಳಗೆ ನಿದ್ರಾಮುದ್ರಿತವಾಗಿ ಬಿದ್ದಿತ್ತು, ನನ್ನ ಕಾಲೆಲ್ಲಾದರೂ ತಡೆದ ಕೂಡಲೇ ಕೈಕಾಲು ಅಲ್ಲಾಡಿಸಿ ಜೀವ ಚಿಹ್ನವನ್ನು ಪ್ರದರ್ಶಿಸುತ್ತಿತ್ತು ಪೂನಾಕ್ಕೆ ಹೊರಟ ಒಬ್ಬಾಕೆ ಗಂಡನ ತೊಡೆಯ ಮೇಲೆ ತನ್ನ ತಲೆಯಿರಿಸಿ ಎರಡು ಹಲಗೆಗಳ ನಡುವಣ ಪೆಟ್ಟಿಗೆಯೊಂದರ ಮೇಲೆ ಕುಳಿತು ಕೂರ್ಮಯೋಗದಲ್ಲಿದ್ದಳು ಇಂಥ ಸನ್ನಿವೇಶವನ್ನು ಜನಪದದ್ರಷ್ಟಾರರು ಕಲ್ಪಿಸಿಯೇ 'ನಿದ್ದೆಯ ಕೂಸು' ಎಂಬ ಬೈಗುಳವನ್ನು ಸೃಜಿಸಿರಬೇಕು! ಕಲ್ಪನಾ ವಿಲಾಸಿಗಳಿಗೆ ಆ ದೃಶ್ಯ ಬಹಳ ಶೃಂಗಾರ ರಸೋದ್ಗಾರಿಯಾಗಿ ಕಾಣಬಹುದಾಗಿತ್ತು ಎಷ್ಟೋ ಶೃಂಗಾರಕವಿಗಳು ಜೀವನದಲ್ಲಿ ಇಂಥ ಸುಖವನ್ನು ಕಾಣಲಾರದೆ ಕಾವ್ಯದಲ್ಲಿ ತಮ್ಮ ದುಃಖ

ವನ್ನು ತೋಡಿಕೊಂಡಿರಬಹುದಲ್ಲವೆ?

ಒಂದು ನಿಲ್ದಾಣದಲ್ಲಿ ಸರಕ್ಕನೆ ಹತ್ತಿಬಂದ ಪಯಣಿಗನೊಬ್ಬನು ಒಂದು ಕಾಲನ್ನು ಒಳಗಿಟ್ಟು ಇನ್ನೊಂದನ್ನು ಒಳಗಿಡಲು ಜಾಗಕ್ಕಾಗಿ ಒಳಗೆ ಕುಳಿತವನೊಡನೆ ವರಾಹದಂಷ್ಟ್ರವನ್ನು ಹರಿಸಿ ವಾದಿಸುತ್ತಿದ್ದನು ಕುಳಿತವನು ಎದ್ದರೆ ಜಾಗ ಸಂಕ್ಷಿಪ್ತವಾದೀತೆಂಬ ಭಯದಿಂದ ಆರಡಿ ಉದ್ದದ ಶರೀರವನ್ನು ಮೂರಡಿಗಿಳಿಸಿ ವಾಮನರೂಪಿಯಾಗಿ ಬಾಗಿಲ ಮೂಲೆಯಲ್ಲಿ ಗೂಟ ಬಡಿದಂತೆ ತನ್ನ ಶರೀರಾಧೋಭಾಗವನ್ನು ಪ್ರತಿಷ್ಠಾಪಿಸಿಕೊಂಡಿದ್ದನು ಮತ್ತೊಬ್ಬ ಮಹಾರಾಯನು ಹಲಗೆಯ ಮೇಲೆ ಟ್ರಂಕಿಟ್ಟು ಅದರ ಮೇಲೆ ತಾನು ನಿಂತು ಕೈಗಳನ್ನು ಮೇಲ್ಚಾಚಿ ಮೇಲಿ ಹಲಗೆಯ ಮೆಟ್ಟಿ ಮೀರಿ ತಲೆಯನ್ನೆತ್ತಿಕೊಂಡು ತ್ರಿವಿಕ್ರಮ ಪರಾಕ್ರಮವನ್ನು ಪ್ರದರ್ಶಿಸುತ್ತಿದ್ದನು ಕಿಟಕಿಯೊಳಗೆ ನುಗ್ಗಿದ ಸುಗ್ರೀವಕುಲದವನೊಬ್ಬನು ನಿದ್ದೆ ಹೋಗಿದ್ದ ದುರ್ಗ್ರೀವನೊಬ್ಬನೊಡನೆ ಕದನಕ್ಕೆ ನಿಂತು ನಾರಸಿಂಹ ದೃಶ್ಯಕ್ಕೆಡೆಗೊಟ್ಟಿದ್ದನು ಒಬ್ಬ ಆಧುನಿಕ ಸೀತಾದೇವಿಯು ನುಸುಳಿ ಬಂದು ನಮ್ಮ ಕಾಲುಗಳ ನಡುವೆ ಪೃಷ್ಠವನ್ನು ಪ್ರಸ್ಥಾಪಿಸಿಕೊಂಡು ಕುಳಿತು ಹಿಂದೆ ನಿಂತಿದ್ದವರ ಕಡೆಗೆ ತಿರುಗಿ 'ನನ್ನ ಸೀರಿ ಸೆರಗ ಹಿಡಿದು ಜಗ್ಗುತೀರಿ ಯಾಕ' ಎಂದು ರಾವಣತ್ವದ ಆರೋಪವನ್ನು ಮಾಡಿದಳು ಆದರೆ ಅವಳನ್ನು ಬಿಡಿಸಿಕೊಳ್ಳಲು, ಮಾನರಕ್ಷಣೆ ಮಾಡಲು ಪಕ್ಕದಲ್ಲ ರಾಮನಿರಲಿಲ್ಲ ಇದ್ದ ಹನುಮಂತನೂ ನೆರವಿಗೆ ಬರದೆ ''ಸುಮ್ಮನೆ ಕುಂತ್ಕೊಳ್ಳಮ್ಮ, ಇಲ್ಲ್ಯಾರು ನಿನ್ನಂಥ ತ್ರಿಪುರಸುಂದರಿಯ ಸೆರಗ ಹಿಡೀಲಿಕ್ಕೆ ಬಂದಾರು?' ಎಂದು ಗದ್ದರಿಸಿ ಬಿಟ್ಟನು! ಈ ನಾನಾವತಾರಗಳ ನಡುವೆ ತಿರುಪತಿ ಯಾತ್ರೆ ಮಾಡಿಕೊಂಡು ಬಂದ ಕುಟುಂಬದ ಸ್ತ್ರೀಪುರುಷರ ಮುಂಡಿತಶಿರಸ್ಸುಗಳೂ ಅಳುವ ಮತ್ತು ಮೂತ್ರಪುರೀಷವಿಸರ್ಜನಪರವಾದ ಅಪರಿಮಿತ ಸಂಖ್ಯೆ ಮಕ್ಕಳೂ ಸೇರಿ ಜಗತ್ತಿನ ವಿಶ್ವರೂಪ ದರ್ಶನವನ್ನೇ ಮಾಡಿಸಿಕೊಡುತ್ತಿದ್ದರು ನನಗಾಗ ಒಂದು ಸ್ಫೂರ್ತಿ ಬಂದಿತು

ಪ್ರಜಾತಂತ್ರಗಣರಾಜ್ಯದ ತತ್ವವಿದನು ಕಂಡೆ–
ಜಾತ್ಯತೀತವಾಗಿರುವುದು ಮತದಾರರ ಮಂಡೆ!
ಮೂರನೆಯಾ ವರ್ಗದಲ್ಲಿ ಜೀವಜಡಗಳೊಂದೆ

ಉದ್ಯಮ ಪೂರಯಿಕೆ ಮಂತ್ರಿಶಾಖೆಯ ಕಚೇರಿಯೆದುರು ಆ ಶಾಖೆಯ ಕೆಳತರಗತಿಯ ೩೦೦ ಜನ ನೌಕರರನ್ನು ಕಡಿಮೆ ಮಾಡುವುದರ ವಿರುದ್ಧವಾಗಿ ಮತಪ್ರದರ್ಶನ ನಡೆಸಿದರು. ಈ ನೌಕರರ ಪ್ರತಿನಿಧಿಗಳು ಉದ್ಯಮ ಮತ್ತು ಪೂರಯಿಕೆಗಳ ಮಂತ್ರಿ ಶ್ರೀ ಮಹತಾಬರನ್ನು ಭೇಟಿಯಾಗಿ ಬೇರೆ ಕೆಲಸ ಕೊಡಿಸದೆ ನೌಕರರನ್ನು ಕೆಲಸದಿಂದ ತೆಗೆದುಹಾಕಲಾಗದೆಂದು ಕೇಳಿಕೊಂಡರು. ಈಗಾಗಲೇ ಈ ಶಾಖೆಯಲ್ಲಿ ೫೭ ಜನರನ್ನು ಕೆಲಸದಿಂದ ತೆಗೆಯಲಾಗಿದೆಯೆಂದೂ ಇನ್ನು ೧೨೩ ಜನರಿಗೆ ನೋಟೀಸು ಕೊಡಲಾಗಿದೆಯೆಂದೂ ತಿಳಿಯುತ್ತದೆ. ಕೆಲಸ ಕೇಳಲಿಕ್ಕೆ ಹೋದ ಜನರು ಸೀರೆ ಉಟ್ಟುಕೊಂಡು ಹೋಗಿದ್ದರೆ ಅಥವಾ ತಮ್ಮ ಹೆಂಡತಿಯನ್ನೋ ಬಾಲಿಗ ಹುಡುಗಿಯರನ್ನೋ ಕರೆದು ಕೆಲಸ ಕೇಳಿರೆಂದು ನಿಲ್ಲಿಸಿದ್ದರೆ ಏನಾದರೂ ಪ್ರಯೋಜನವಾಗುತ್ತಿತ್ತೋ ಏನೋ! ಏಕೆಂದರೆ ಜೀವನಾಂಶ ಬೇಡುವ ಗಂಡ ಮಕ್ಕಳ ಹೊಟ್ಟೆ ಹೊರೆಯುವ ಜವಾಬುದಾರಿಯಿಲ್ಲದ (ಗಂಡಸಿನ ಅರ್ಧ ಶಕ್ತಿಯಿರುವ) ಹೆಂಗಸಿಗೆ ಸಮಪಾಲು ಕೊಡಲು ಕಾಯದ ಕಾಯಿಸಲು ಮಂತ್ರಿಮಂಡಲ ಹೊಂಚುಹಾಕಿದ್ದು ಎಲ್ಲರಿಗೂ ತಿಳಿದ ಸಂಗತಿಯಲ್ಲದೆ ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಹಲಮಂತ್ರಿಗಳು ಡಾನ್ ಕ್ವಿಕ್ಸೋಟನ ಶೃಂಗಾರ ವೀರ ವಿಲಾಸದಿಂದ ಕಂಕಣ ಕಟ್ಟಿ ನಿಂತದ್ದು ಸುವಿದಿತವಿದೆ. ಇಂಥ ಕಾಲದಲ್ಲಿ ಕಾಯದೆಯಿಂದಲೂ ಸರಕಾರದಿಂದಲೂ ಫಾಯಿದೆ ಮಾಡಿಕೊಳ್ಳಬೇಕೆಂಬುವವರು ಹೆಂಗಸರನ್ನು ಮುಂದೆ ನಿಲ್ಲಿಸಬೇಕು. ಇದೇ ಇಂದು ನಮಗೆ ಬೇಕಾದ ಸವ್ಯಸಾಚಿತ್ವ, ಎರಡನೆಯ ಮದುವೆ ಮಾಡಿಕೊಳ್ಳಕೂಡದೆಂಬ ಕಾಯದೆಯನ್ನು ಕೈಕಾಲು ಕಟ್ಟಿ ಮೂಲೆಗೆಸೆಯಲೆಂದು ಒಬ್ಬ ಜಪಾನಿಯನು ಹೆಂಡತಿಯ ಅನುಮತಿಯಂತೆ ಕೋರ್ಟಿನಿಂದ ವಿವಾಹವಿಚ್ಛೇದವನ್ನು ಪಡೆದು ಬಳಿಕ ಅವಳನ್ನೇ ಮಗಳಾಗಿ ದತ್ತಕ್ಕೆ ತೆಗೆದುಕೊಳ್ಳಲು ಅರ್ಜಿ ಮಾಡಿದ್ದಲ್ಲದೆ ಮತ್ತೊಬ್ಬಳನ್ನು ಮದುವೆಯಾಗಲು ರಿಜಿಸ್ಟ್ರಾರರ ಆಫೀಸಿಗೆ ನಡೆದನಂತೆ! ಇನ್ನೇನು ಮಾಡಬೇಕವನು ಹೇಳಿ— ಮೊದಲ ಹೆಂಡತಿಯಿಂದ ಮಕ್ಕಳಾಗದಾಗ! ದತ್ತಪುತ್ರನೇದಾದರೂ ಔರಸಪುತ್ರನ ಪಿತೃಭಕ್ತಿಯನ್ನು ತೋರಿಸಿಯಾನೇ? ಅದರಿಂದಲೇ ಮಹಾಲಿಂಗರಂಗಕವಿ 'ದತ್ತಪುತ್ರನಿಗೇತಕ್ಕೆ ಪಿತೃಭಕ್ತಿ?' ಎಂದು ಕೇಳಿರುವುದು!

ಹೀಗಿರುವುದರಿಂದ ಪ್ರಿಯತಮೆಯರ ಮತ್ತು ಗೆಳತಿಯರ ಆಶ್ರಯವನ್ನು ಪಡೆದು ಸ್ತ್ರೀಯರುದ್ಧಾರ ಮಾಡಹೊರಟ ಹುಂಬ, ವ್ಯಾಮೋಹಪರ ಅಧಿಕಾರಿಗಳಿಗೆ ಬುದ್ಧಿ ಕಲಿಸಿ ತಮ್ಮ ಮತ್ತು ತಮ್ಮ ಹೆಂಡತಿ ಮಕ್ಕಳ ಉದರ ಪೋಷಣೆ ಮಾಡಿಕೊಳ್ಳಲು ಆ ನೌಕರರು ಹೊಂಚು ಹಾಕಿದ್ದರೆ ಖಂಡಿತವಾಗಿ ಫಲವಾಗುತ್ತಿತ್ತು. ನಕ್ರನೀತಿಸಾರದಲ್ಲಿ ಕೂಡ ಇದೇ ಮಾತನ್ನು ಹೇಳಿದೆ

ಶಾಸನಗಳು ವಿರುದ್ಧವಾಗಲು
ಭಾಷಣದಿ ನಿಂದಿಸದಿರವುಗಳ
ಮೋಸವನು ಖಂಡಿಸಲು ಮಾಯಾವಿದ್ಯೆಯನು ಬಳಸು
ದೋಷವಿಲ್ಲದರಿಂದ ತಾಮಸ
ವಾಸಿಯಾಗಲು ತಾಮಸವ ತಾ
ಲೇಸು ವ್ಯವಹಾರಜ್ಞರಿಗೆ ಕಾಲತ್ರಯದೊಳೆಂದೂ

❀ ❀ ❀ ❀

ಆಕಾಶವಾಣಿಯ ಕೇಂದ್ರಗಳಲ್ಲಿಂದು ವಿದ್ಯಾವಂತರ ಪ್ರೋಗ್ರಾಮು, ಹಳ್ಳಿಗರ ಕಾರ್ಯಕ್ರಮ, ಹೆಂಗಸರ ಕೂಟ, ಮಕ್ಕಳ ಮಂಗಳ ಮುಂತಾದ ಹಲವಾರು ಬಗೆಯ ಪ್ರೋಗ್ರಾಮುಗಳನ್ನಿಟ್ಟಿದ್ದನ್ನು ಕಂಡು ಒಬ್ಬರು ಕುರುಡರ ಕುಂಟರ, ಮೂಕರ, ಕಿವುಡರ ಪ್ರೋಗ್ರಾಮುಗಳನ್ನೇಕಿಡುವ ದಿಲ್ಲ? ಎಂದು ಕೇಳಿದ್ದಾರೆ ಇದು ಖಂಡಿತವಾಗಿಯೂ ಬರಾಬರಿ. ನಾಳೆ ಹುಚ್ಚರಾಸ್ಪತ್ರೆಯ ರೋಗಿಗಳು ಕೂಡ ತಾವು ಹಿಂದುಸ್ಥಾನದ ನಾಗರಿಕ ಹಕ್ಕುಗಳನ್ನು ಪಡೆದವರಾದುದರಿಂದ ತಮಗಾಗಿ ಸ್ಪೇಶಲ್ ಪ್ರೋಗ್ರಾಂ ಇಡಿಸಲಿಲ್ಲವೇಕೆ ? ಎಂದು ಕೇಳಿದರೆ ತಪ್ಪಾಗಲಾರದು. ಏಕೆಂದರೆ, ಸ್ತ್ರೀ ಸ್ವಾತಂತ್ರ್ಯ, ವಿದ್ಯಾರ್ಥಿಗಳ ಸ್ವಾತಂತ್ರ್ಯಗಳಿಗೆ ಮಾನ್ಯತೆ ದೊರೆತ ಮೇಲೆ ಮಕ್ಕಳ ಮತ್ತು ಹುಚ್ಚರ ಸ್ವಾತಂತ್ರ್ಯಕ್ಕೂ ಮನ್ನಣೆಯನ್ನು ಕೊಡಲೇ ಬೇಕಾಗುವುದು ಸ್ವಾತಂತ್ರ್ಯವೆಂದರೆ ಸ್ವಾಚ್ಛಂದ್ಯ ಇಂಥ ಸರಕಾರೀ

ಆಡಳಿತೆಯ ಪ್ರೋಗ್ರಾಮುಗಳನ್ನೂ ಅವುಗಳಲ್ಲಿಯ ಕಾರ್ಯಾಂಗಗಳ ಔಚಿತ್ಯ ಗುಣಾದಿಗಳನ್ನೂ ಮೊದಲೇ ಊಹಿಸಿ ಭೋಜರಾಜನ ಆಸ್ಥಾನದಲ್ಲಿದ್ದ ಮರ್ಕಟ ಕವಿ ಬರೆದಿಟ್ಟಿದ್ದಾನ

ಎಲ್ಲ ಜನರನ್ನು ಸಂತಯಿಸಲೆಳೆಸುವ ನೃಪತಿ
ಕಳ್ಳ, ಕಪಟಿ, ಕಪೀಂದ್ರ, ಹುಚ್ಚು ರೂಪಾಜೀವ
ಗೊಲ್ಲ, ಗಾವಿಲ, ಗದ್ದಲಿಗರ ಮುಖ್ಯಸ್ಥರಿಂ
ಗಾಸ್ಥಾನಮರ್ಯಾದೆಯ
ಸಲ್ಲಿಸಲೆಬೇಕು, ಮದ್ಯಪನಿಗೂ ಬಹುವಚನ
ಸೊಲ್ಲಿಸಲೆಬೇಕು, ಸರ್ವಸಮಾನತೆಯ ಕೊಟ್ಟ
ಸಿಲ್ಲಿಸಲೆಬೇಕು ಸುಜನರ್ಕಳಂ ದುರ್ಜನರ ಸಾಲಿನಲಿ
ಸೂಡಿ ಹಿಡಿದು!

* * * *

ಊರ ಮೇಲಿನ ಸಮಾಚಾರದೊಳಗೆ ಮರುಳುಸಿದ್ಧನ ಸ್ವಂತ ಸಮಾಚಾರ ಮುಳುಗಿ ಹೋಗಿತ್ತು ಆದರೆ ಬಿಸಿಲಬೇಗೆಗೆ ಒಳಲಿ ಬೆಂಡಾಗಿ ಬಾಯ್ ಬತ್ತಿ ದಗೆ ಸುತ್ತಿ ಬಸವಳಿದ ಸಭೆಯಲ್ಲಿ ಯಾರಿಗೂ ಯಾವ ರಾಜಕಾರಣವೂ ಬೇಡಾಗಿ ಹೋಯಿತು ಮೊನ್ನಿನ ಸಭೆ ಸಪ್ಪೆ ಸಾಮ್ರಾಜ್ಯವಾಗಿತ್ತು ಸುಂಟರಗಾಳಿ ಸುಯ್ಯೆಂದು ಸುಳಿಸುಳಿಯುತ್ತ ಊರಿಗರ ಕಣ್ಣನಗಳಿಗೆ ಧೂಳಿನ ಕದಲಾರತಿಯೆತ್ತುತ್ತಿತ್ತು ಧೂಳೀಸ್ನಾನ, ಧೂಳೀಪಾನ ನಮಗೂ ಆಯಿತು Dust thou art and to dust thou returnest— ನೀನು ಧೂಳು, ನಿನಗೆ ಧೂಳೀಗತಿ ಎಂಬ ಮಹಾ ವಾಕ್ಯದ ಅರ್ಥದ ಸವಿ ನಮಗಾಯಿತು!

ಇಷ್ಟು ದಿನಗಳಾದರೂ ಸಿದ್ಧಪತ್ನಿ ಸಭಾಂಗಣಕ್ಕೆ ಕಾಲಿಟ್ಟಿದಿಲ್ಲ. ಅವಳ ತಪಸ್ಸು ಅಂತರ್ಗತವಾಗಿತ್ತು ಆದರೆ ಬೇಸಿಗೆ ಈ ವರ್ಷದಲ್ಲಿ ಕವಿ ವರ್ಣನಾ ಸಹಜವಾಗಿರುವುದು ಅವಳ ಹೃದಯಕ್ಕೆ ತಿಳಿಯಿತು--

" ಕರೆದುವು ಸೀರುಡುಗಳ್ ಪೆರ್
ಮರೆಗಾಡೆಲೆಯಿಕ್ಕಿ ಕಳಲೆಬಿಳ್ದುವುತೊರೆಗಳ್

ಪರಿಗೆಟ್ಟುವು ಬೆಳ್ವಯಲೊಳ್
ಸರಳಿಸಿದವು ಮರುಮರೀಚಿಕಾವಾಹಂಗಳ್

ಎಂಬಂತಿದ್ದ ಬೇಸಿಗೆ ಪಾಕಶಾಲೆಯೊಳಗೂ ಪ್ರವೇಶಿಸಿ ಏಕಾಗ್ರ ಚಿತ್ತದಿಂದ ಅನ್ನ ಬ್ರಹ್ಮದ ಉಪಾಸನೆ ಮಾಡುತ್ತಿದ್ದ ಅವಳ ಸಮಾಧಿಯನ್ನು ಒಮ್ಮೆಲೇ ಭಂಗಿಸಿಬಿಟ್ಟಿತು ಆದುದರಿಂದ ಕೆರಳಿದ ಸಿಂಹಿಣಿಯಂತೆ ಆಕೆ ಸಭಾಂಗಣಕ್ಕೆ ಧಾವಿಸಿ, ಈ ಬೇಸಿಗೆಯನ್ನು ಈಗಲೇ ಬಂಧಿಸಿಬಿಡಬೇಕು, ಎಂದು ಚಂಡವಾಣಿಯಿಂದ ಘೋಷಿಸಿಬಿಟ್ಟಳು ಇದನ್ನು ಕೇಳಿ ಸಭೆ ಅವಕ್ಕಾಗಿ ಹೋಯಿತು!

ಸಾಲೆಯ ಹುಡುಗರು ೧॥ ಬಿಡುವೆಂದು ರಸ್ತೆಯಲ್ಲ ಮನೆಗೆ ಮರಳುತ್ತಿದ್ದರು ಒಬ್ಬೊಬ್ಬರು ಒಂದೊಂದು ಸಿನಿಮಾಟ್ಯೂನನ್ನು ಗುಣಗುಣಿಸುತ್ತಿದ್ದರು ಅಂಥ ಉರಿಬಿಸಲಿನಲ್ಲಿ! ಹರಯವೆಂದರೇ ಹಾಗೆ, ಹುಡುಗಾಟಿಕೆಗೆ ಬೆಂಕಿ ಬಿಸಿಲುಗಳೆಂಬುದುಂಟೇ? ಅದರೊಳೊಬ್ಬ ಕನ್ನಡ ಪ್ರಿಯನೂ ಇದ್ದಂತೆ ತೋರಿತು ಏಕೆಂದರೆ,ಎಲ್ಲರೂ ಏನೇನೋ ಒಂದು ಸ್ವಾಸಿತವಿಳು, ತೆಲುಗು ಸ್ವರಗಳನ್ನು ದುಂಬಿಸುತ್ತಿದ್ದರೆ ಒಬ ನು ತನ್ನ ಕಪ ಕಂರವೆತ್ತಿ ಹಾಡುತ್ತಿದ್ದ ಬಗ ಎದ್ದು ಕೇಳಿಸುತ್ತಿತ್ತು

ಬೇಸಿಗೆ । ಬಂತು । ಬೇಸಿಗೆ ॥ಪ॥

ಬೇಸಿಗೆ ಬಂತು ನಾಡಿಗೆ । ಬಂತು ಕಾಡಿಗೆ
ಬಂತು ಬೀಡಿಗೆ । ಬಂತು ಗೂಡಿಗೆ । ಬೇಸಿಗೆ ಬಂತು

ಬೇಸಿಗೆ ಬಂತು ಜಗದೊಳಗೆ । ಬಂತು ಜನದೊಳಗೆ
ಬಂತು ಮನೆಯೊಳಗೆ । ಬಂತು ಮನದೊಳಗೆ.

ಕೆರೆಬತ್ತಿ ಹೋಯ್ತು । ತೊರೆ ಬತ್ತಿ ಹೋಯ್ತು
ಹರಿಬತ್ತಿ ಹೋಯ್ತು । ನರಿ ಸತ್ತು ಹೋಯ್ತು ಹಾಯ್.

ಬೇಸಿಗೆ ಬಂತು ಊರಿಗೆ । ನಮ್ಮ ಕೇರಿಗೆ
ನಿಮ್ಮ ಮಾರಿಗೆ । ಕೆರೆಯ ನೀರಿಗೆ .

ಬೇಸಿಗೆ ಎಲ್ಲ ಹಾಸಿಗೆ, ಕೊಳೆಯ ರಾಶಿಗೆ
ಬಟ್ಟೆ ಮಾಸುಗೆ । ತಾಸು ತಾಸಿಗೆ. ..

ಬೇಸಿಗೆ ಬಂತು ಪ್ರೀತಿಗೆ । ಬಂತು ನೀತಿಗೆ
ಸಭ್ಯ ರೀತಿಗೆ । ನಮ್ಮ ಖ್ಯಾತಿಗೆ

ನಮ್ಮ ಸರಕಾರಗಳ ಶಾಸನ ಸಭೆಗಳಿಂದು ಅಘಟಿತ ಘಟನಾ ಸೂತನ ಬ್ರಹ್ಮಗಳಾಗಿವೆ, ಋತಿಬಂದ ಕೂಡಲೆ ಋತಿಬಂದ ಮಸೂದೆಯನ್ನು ಋತಿಬಂದಷ್ಟು ಕಾಲದಲ್ಲಿ ಕಾಯಿದೆಯನ್ನಾಗಿ ಮಾಡಿಬಿಡುತ್ತವೆ ಮದ್ರಾಸು ಸರಕಾರದ ವಿಷಯವಾಗಿ ಇದೇ ಮಾತನ್ನು ಹಿಂದುಪತ್ರಿಕೆಯ ಸಂಪಾದಕೀಯ ಹೇಳಿರುವುದನ್ನು ಮೊನ್ನೆ ನಮ್ಮ ಸಿದ್ಧಪ್ಪ ಕಂಡ ಅವನಿಗ ಇದರಲ್ಲಿ ಯಾವ ತಪ್ಪೂ ಕಾಣಲಿಲ್ಲ ಏಕೆಂದರ ನಾವೇ ಶಾಸನ ಸಭಗೆ ಆರಿಸಿ ಕಳಿಸಿದ ಜನರು ಮಾಡುವ ಕಾಯಿದೆಗಳು ನಮಗೆ ಅನುಕೂಲ ವಾಗಿರದೆ ಹೇಗೆ ಪ್ರತಿಕೂಲವಾಗಿದ್ದಾವು? ಎಂಬುದು ಅವನ ತರ್ಕ ಶ್ರಮವಿಭಜನೆಯನ್ವಯ ನಮ್ಮ ಪ್ರತಿನಿಧಿಗಳಿಗೆ ನಮ್ಮ ಬಗ್ಗೆ ವಿಚಾರ ಮಾಡುವ ಕೆಲಸವನ್ನು ಬಿಟ್ಟು ಕೊಡುವುದೇ ಶಾಸನ ಸಭಗೆ ನಾವು ಪ್ರತಿನಿಧಿಗಳನ್ನು ಕಳಿಸಿಕೊಡುವುದರ ಅರ್ಥ ಎಂದು ಸಿದ್ಧಪ್ಪಸಂತೆಯೋ ಮಾದಯ್ಯನೂ ನಂಬುತ್ತಾನೆ ಎಂದ ಮೇಲೆ ಶಾಸನಸಭಾ ಸದಸ್ಯರ ಅಭಿಪ್ರಾಯವೆಲ್ಲ ಜನಾಭಿಪ್ರಾಯವೆಂದೇ ಆಗಲಿಲ್ಲವೇ ? ಹಿಂದುಸ್ತಾನದಲ್ಲಿ ಅನೇಕ ಜನರು ಈ ರೀತಿ ನಂಬಿರುವುದು ಸಹಜವಾಗಿದೆ ದುಡಿಯುವುದು ಗಂಡನ ಕೆಲಸ, ಅಡಿಗೆಮಾಡಿ ಬಡಿಸುವುದು ಹೆಂಡತಿಯ ಕೆಲಸ ಎಂಬುದೇ ಅವರ ವಾದ ವಿಚಾರ ಮಾಡುವುದು ಒಬ್ಬರ ಕೆಲಸ ಆಚಾರದಲ್ಲಿ ತರುವುದು ಮತ್ತೊಬ್ಬರ ಕೆಲಸ, ಒಂದು ಬ್ರಾಹ್ಮ, ಇನ್ನೊಂದು ಕ್ಷಾತ್ರ ಸೇನಾಪತಿ ವಿಚಾರಮಾಡಿ ಆಜ್ಞೆಯಿತ್ತರೆ ಸಿಪಾಯಿಗಳು ಪಾಲಿಸುತ್ತಾರೆ. ಎಲ್ಲರೂ ವಿಚಾರಮಾಡಲಿಕ್ಕೆ ಹತ್ತಿದರೆ 'ಮೂವರು ಕೂಡಿದರಣ್ಣಾ, ಹೊಯ್ದರು ಬಾಯಲಿ ಮಣ್ಣ' ಎಂದಾಗುವುದಿಲ್ಲವೇ? ಸಭೆಯಲ್ಲಿ ಈ ವಿಚಾರ ಬಂದ ಕೂಡಲೆ ನಾಸ್ತಿಕ ನಿರ್ವಾಣಪ್ಪನು ಒಂದು ವ್ಯಂಗ್ಯ ಕವನವನ್ನು ಓದಿಬಿಡಬೇಕೇ ?

ತಲೆಗಾರರೇ ಬೇರೆ, ಕೈಗಾರರೇ ಬೇರೆ
ತಲೆಗೆ ಕೈಯಿಲ್ಲ, ಕೈಗಿಲ್ಲ ತಲೆಯು ।

ಮೂಗುಗಾರರ ಬೇರೆ, ಬಾಯಿಗಾರರೆ ಬೇರೆ—
ಮೂಗಿಂಗ ಬಾಯಿಲ್ಲ, ಬಾಯ್ಗೆ ಮೂಗಿಲ್ಲ ||
ಅಡಿಗೆಗಾರರೆ ಬೇರೆ, ಉಣ್ಣುವವರೇ ಬೇರೆ
ಅಡಿಗೆಯವರಿಂಗುಂಬ ಹಕ್ಕು ಇಲ್ಲ |
ಉಂಬವರಿಗಡಿಗೆಯ ಜ್ಞಾನವೇತಕೆಬೇಕು ?
ಅಡಿಗಗಾರರಿಗೇಕೆ ಬೇಕು ಹೊಟ್ಟೆ? ||
ರೋಗಿಗೇತಕೆ ವೈದ್ಯಶಾಸ್ತ್ರದ ಜ್ಞಾನ?
ಡಾಕ್ಟರರಿಗೇತಕ್ಕೆ ನೀ ರೋಗ ದೇಹ ?
ಮದ್ದು ಮಾಡುವನೊಬ್ಬ, ತಿನ್ನುವವನಿನೊಬ್ಬ,
ಎರಡನೂ ಒಬ್ಬನೇ ಮಾಡಲೇಕೇ ?
ಮೋಟಾರು ಮಾಡುವವನೊಬ್ಬ, ಕೊಳ್ಳುವನ್ನೊಬ್ಬ
ನಡೆಸುವವನೊಬ್ಬ, ಹತ್ತುವನದೊಬ್ಬ |
ಹಣಕೊಡುವನಿನ್ನೊಬ್ಬ, ಬೀಳುವವ ಮತ್ತೊಬ್ಬ,
ಅಪರಾಧಿಯಾಗುವವ ಮತ್ತಿನ್ನೊಬ್ಬ ||
ಸ್ವಾವಲಂಬನವೆಂಬುದಾವ ನಾಗರಿಕಕಲೆ,
ಒಬ್ಬರನ್ನೊಬ್ಬ, ನಂಬುವುದೆ ನೀತಿ!
ಮಾನವ ಭ್ರಾತೃತ್ವ ಸಹಕಾರ ತತ್ವಗತ,
ಬಲ್ಲದರು ಹೇಳುವುದೆ ಇಂಥ ರೀತಿ ||
ಡಾರ್ವಿನನ ತತ್ವದಂತ ಪ್ರಯೋಜನಕವಾದ
ನಿಮ್ಮ ತಲೆಯುಳಿದೀತು, ಪ್ರತಿನಿಧಿಗಳ |
ಮುಂಡವಿಲ್ಲಾದೀತು, ರುಂಡವೊಂದುಳಿದೀತು |
ಇಬ್ಬರೂ ಸೇರುವುದು ಸುಲಭವಕ್ಕು ||

   

ಕಲ್ಕತ್ತದಲ್ಲಿ ಭಿಕ್ಷುಕರು ಮಕ್ಕಳನ್ನು ಕದ್ದುಕೊಂಡು ಹೋಗುತ್ತಾರೆಂದು ಹಬ್ಬಿದ ಸುದ್ದಿಯಿಂದ ಗಾಬರಿಗೊಂಡ ಜನರು ನಾಲ್ಕೈದು , ಜನ ಭಿಕ್ಷುಕ ಭಿಕ್ಷುಕಿರಯನ್ನು ಚಿತ್ರಹಿಂಸೆಗೆ ಗುರಿಪಡಿಸಿದ ವರದಿಯನ್ನು ಬೆಳಗಿನ

ಪತ್ರಿಕೆ ಪ್ರಕಟಿಸಿದೆ ಇದು ನಮ್ಮ ಕಂಪನಿಯ ಸದಸ್ಯರ ತಲೆ ತಿನ್ನ ಹತ್ತಿತು ತಮ್ಮ ಹೊಟ್ಟೆಯನ್ನೇ ತುಂಬಿಕೊಳ್ಳಲಾರದ ಭಿಕ್ಷುಕರು ತುಂಬ ಬೇಕಾದ ಹೊಟ್ಟೆಗಳ ಸಂಖ್ಯೆಯನ್ನು ಹೆಚ್ಚಿಸಲು ಏಕೆ ಹಾತೊರ ಯುತ್ತಾರೆ? ಎಂದು ಎಲ್ಲರಿಗೂ ಶಂಕೆ, ಷ್ಟು ಹೊತ್ತು ವಿಚಾರ ಮಾಡಿ ದರೂ ಈ ಪ್ರಶ್ನೆ ಬಗೆಹರಿಯದಾಯಿತು ಮಕ್ಕಳಿಂದ ಸಂತತಿಯ ಅಪೇಕ್ಷ ಅವರು ಹಾಗೆ ಮಾಡುತ್ತಾರೆಂದರೆ ನಂಬಲುಬರದು

ಅವರಿಗೆ ಮಕ್ಕಳ ಸಂಖ್ಯೆ ಏನೂ ಕಡಿಮೆಯಿಲ್ಲ ಒಬ್ಬ ದಂಪತಿ ಒಂದು ಬೀದಿಯ ತುದಿಯಲ್ಲಿ ಕುಳಿತರೆ ಆ ಬೀದಿಯ ಎಲ್ಲ ಕೇಂದ್ರಗಳಿಗೂ ನಿಯಮಿಸಲು ಅಗತ್ಯವಾದಷ್ಟು ಮಕ್ಕಳು ಅವರಿಗ ಇರುತ್ತವ ಇನ್ನು ಅವರಿಗೇನಾದರೂ ರಾಜಕೀಯ ಉದ್ದೇಶ ಇರಬಹುದೇ? ಅವರಿಗೆ ರಾಜ ಕೀಯದ ಗಂಧವೇ ಗೊತ್ತಿಲ್ಲ ಹಾಗಾದರೆ ಅವರಿಗೆ ಮಕ್ಕಳ ಮೇಲೆ ಅಷ್ಟೇಕೆ ಪ್ರೇಮ? ಅದು ಮಕ್ಕಳ ಮೇಲಿನ ಪ್ರೇಮವಲ್ಲ ಸಾಕಷ್ಟು ಭಿಕ್ಷ ಕೊಡದವರ ಮೇಲೆ ಸೇಡು ತೀರಿಸಿಕೊಳ್ಳಲು ಅವರ ಮಕ್ಕಳನ್ನೇ ತಮಗಾಗಿ ದುಡಿಯಲು ಹಚ್ಚುವ ಚಾಣಕ್ಯ ನೀತಿ ಇರಬಹುದೆ? ಎಂದು ಅನೇಕರು ತರ್ಕಿಸಿದರು ಈ ಯಾವ ಕಾರಣವೂ ಅಲ್ಲ ಈಗ ಕೆಲ ವರ್ಷಗ ಳಿಂದ ಅನ್ನದ ಕ್ಷಾಮ ಬಹಳವಾಗಿದೆ ಮಕ್ಕಳನ್ನು ಕಳುವ ಅಪರಾಧದ ಬಲ ದಿಂದ ಭಿಕ್ಷುಕರು ಸರಕಾರದ ಆತಿಥ್ಯವನ್ನು ಪಡೆಯಲು ಹೊಂಚು ಹಾಕಿರ ಬಹುದೇ? ಎಂದು ನಮ್ಮ ಸಂಗಯ್ಯನವರು ಸೂಚಿಸಿದರು ಕರ್ಮ ಧರ್ಮ ಸಂಯೋಗದಿಂದ ಅಷ್ಟೊತ್ತಿಗೆ ಒಂದು ಸಿತಾರಿನ ಸ್ವರ ಹೊರಗಿನಿಂದ ಕೇಳಿಸಬೇಕೇ?

ಬಂಗಾಲಸೇ ಆಯಾ ಹು ಮೈ
ಚಂಡೀ ಚರನ್ ಕಹತೇ ಮುಝೇ!
ಸಬ್ ಸಾಧುಕೇ ಮಹಾರಾಜ ಮೈ
ಕಾಪೀನ ಗೌರೀ ನಾಥ ಜೈ!

ದುನಿಯಾಮೆ ಜೋ ಹೈ ಪಾಪಿಯೋ
ಉದ್ಧಾರ ಕರನೇ ಕೇಲಿಯೇ—

ಚಂಡೀ ಪದೋಂಮೇ ರಕ್ತಕಾ
ಉನಕಾ ಕರೂ ಅಭಿಷೇಕ ಮೈ!
ಅಜ್ಞಾನಿಯೋಂ ಯೇ ಲೋಗೊಮೇ
ಬಚ್ಚೋಂಕಾ ಪಾಲನ ಕರನೆಕೋ
ಆತಾನಹೀ ಉಸ್ ವಾಸ್ತೆ ಮೈ
ಲೇಕರ್ ಚಲೂ ಚಂಡೀಕೆ ಪಾಸ್!
ಯೇ ಭಸ್ಮ ಹೈ ಮಾತಾ ಪಿತೋಂಕೇ
ಆಂಖೊಮೇ ಡಾಲೂ ಜಬ್ ಝುಟಕ್
ಅಂಧೋಂಕೆ ಭಾತಿ ಹೋತೆ ಹೈ–
ಬಾಲೋಂಕೊ ಲೇಕರ್ ಜಾತು ಮೈ!
ಕ್ಯಾವಾಸ್ತೆ ಬಚ್ಚೋ ಇನ್ಕೊ ಬೋಲ್?
ನಹಿ ಹೂ ಸಿಖಾತೇ ಸದ್ಗುಣ,
ಚಂಡೀಕೋ ಸಬ್ ಅರ್ಪಣ್ ಹೋ ಜಾಯ್–
ಭಾರತ್ ವಿರುದ್ಧ್ ಹೋ ಜಾಯೆಂಗಾ!

❀ ❀ ❀ ❀

ಅಜಮೀರದಲ್ಲಿ ನಗರ ಸಭೆಯು ೩೦ ಲಕ್ಷ ರೂಪಾಯಿಗಳ ಒಂದು ಚರಂಡಿ ಯೋಜನೆಯನ್ನು ತಯಾರಿಸಿವೆಯೆಂದೂ ಅದನ್ನು ಕೇಂದ್ರ ಸರಕಾರವು ಮನ್ನಿಸಿ ಸಹಾಯಮಾಡುವುದಾಗಿ ಆಶ್ವಾಸನವಿತ್ತಿದೆಯೆಂದೂ ಆ ಪತ್ರಿಕೆಯಲ್ಲಿ ಬಂದ ವರದಿ ನಮ್ಮ ಬಸಪ್ಪನ ಕಣ್ಣಿಗೆ ಬಿತ್ತು 'ಅಲ್ಲಾ, ತಿಂದು ಮಾಡಿದ ಗಲೀಜನ್ನು ಚೊಕ್ಕ ಮಾಡಲು ಈ ಮಂದಿ ೩೦ ಲಕ್ಷ ರೂ ಖರ್ಚು ಮಾಡುತ್ತದಲ್ಲ, ಅಂದಮೇಲೆ ತಿನ್ನಲಿಕ್ಕೆ ಎಷ್ಟು ಲಕ್ಷ ಮಾಡುತ್ತಿರಬಹುದು?' ಎಂದು ಅವನು ಲೆಕ್ಕ ಹಾಕಲಾರಂಭಿಸಿದ. ಅಷ್ಟರಲ್ಲಿ ನಿಂಗವ್ವ ಬಾಯಿಹಾಕಿ 'ರುಪರುಪಾಯಿನ್ನೇ ತಿಂದ್ ಕ್ಯಾಸ ಒಕ್ಕೊಡ್ತಾರೇನೀಮಂದಿ?' ಎಂದು ಉದ್ಗರಿಸಿದಳು. ಆಗ ಶಿವರಯ್ಯಂಗಾರಿ ತಾನು ಚಿಕ್ಕಂದಿನಲ್ಲಿ ಕೇಳಿದ್ದ ಒಂದು ಕತೆಯನ್ನು ಹೇಳಿದ. ಒಂದು ಕುದುರೆಯಿತ್ತಂತೆ, ಅದು ಗುದದ್ವಾರದಿಂದ ರೂಪಾಯಿಗಳನ್ನು ಹೊರ ಹಾಕುತ್ತಿ

ತ್ತೆಂದು ಹೇಳಿ ಕೆಲವು ಬುದ್ಧಿವಂತರಿಗೆ ಒಬ್ಬ ದಡ್ಡ ಸಾರಿದ ಅಂಶವನ್ನು ವಿವರಿಸಿದ. ಅದಕ್ಕೆ ಹೊಂದಿಸಿ ರಾಮಾಚಾರ್ಯರು, ಸುಯೋಧನ ಎಂದು ಕೌರವನಿಗೆ ಹೆಸರು ಬರಲು ಅವನು ಸುಯ್ಯೆಂದು ನಿಶ್ವಾಸ ಒಟ್ಟ ಕೂಡಲೆ ಅವನ ಮೂಗಿನಿಂದ ರೂಪಾಯಿಗಳು ಸುರಿಯುತ್ತಿದ್ದುದೇ ಕಾರಣ ಎಂದು ತಮ್ಮ ಪಾಂಡಿತ್ಯವನ್ನು ಪ್ರಕಟಪಡಿಸಿದರು. ಒಟ್ಟಿನ ಮೇಲೆ ಕರ್ನಾಟಕದ ಯಾವ ನಗರ ಸಭೆಯೂ ನಗರನೈರ್ಮಲ್ಯಕ್ಕಾಗಿ ಇಂಥ ಉತ್ತಮ ಯೋಜನೆ ತಯಾರಿಸಿದ್ದಿಲ್ಲವೆಂದೂ ಹಿಂದುಸ್ಥಾನದಲ್ಲೇ ಇಂಥ ಯೋಜನೆ ಎಂದೂ ಮಾಡದಿದ್ದುದರಿಂದ ಅಜಮೀರದವರು ತೀರ ದಡ್ಡರೆಂದು ಸಭೆಯಲ್ಲಿ ಬಹುಜನರು ಅಭಿಪ್ರಾಯಪಟ್ಟರು. ಇದಕ್ಕೆ ನಮ್ಮ ಸನಾತನ ಧರ್ಮ ಗ್ರಂಥದಲ್ಲಿ ಉಕ್ತವಾದ ವಾಕ್ಯಗಳ ಆಧಾರವಿರುವುದೇ ಅವರಈ ಅಭಿಪ್ರಾಯಕ್ಕೆ ತೂಕ ಕೊಟ್ಟಿತು

ಖಂಡೇಷು ಭಾರತಃ ಶ್ರೇಷ್ಠಃ
ಪುಣ್ಯಭೂಮಿಃ ಪ್ರಕೀರ್ತಿತಃ।
ಕರ್ಣಾಟಃ ಶ್ರೇಷ್ಠ ದೇಶೇಷು
ಶ್ರೇಷ್ಠಃ ಕರ್ಮವಿದಾಂವರಃ

ಭಾರತಕ್ಕೊಬ್ಬನೇ ಬುದ್ಧ
ಕನ್ನಡರ್ ಬುದ್ಧರೆಲ್ಲರೂ।
ಏಕೀಕರಣ ಕಾರ್ಯದಾ
ಅನೇಕೀಕೃತ ಬುದ್ಧಯಃ॥

ಎಲ್ಲರೂ ರಾಜರೇ ಇಲ್ಲಿ
ಪ್ರಜಾಜನರೆ ಇಲ್ಲರಿ।
ಎಲ್ಲರೂ ನಾಗರಿಕರೇ
ಭೆಂಗಿಗಳ್ ಸಿಗಲಾರರು॥

ಮುಖಂಡರೇ ಎಲ್ಲರೂನೂ
ಅನುಯಾಯಿತ್ವ ದುರ್ಲಭ।
ಎಲ್ಲೆಲ್ಲೂ ದೇವರೇ ಇಲ್ಲಿ
ಭಕ್ತವರ್ಗ ಟೋಣಾಪಣಾ॥

ಶೌಚಕ್ಕೆ ಜಾಗವೇ ಇಲ್ಲ
ಎಲ್ಲವೂ ಶೌಚಜಾಗವೇ ।
" ಭೂಗ್ರಾಮ " ಪಟ್ಟಣದಲಿ
ಸ್ವತಂತ್ರರ್ ಪಕ್ಷಿವೋಲ್ ಜನರ್ ॥



ಹಳೆಯ ಗಾದೆಗಿಂತ ಹೊಸದಾದ ಹೊಸ ಗಾದೆಯಿಲ್ಲ ಹೊಸನಾಗರಿಕತೆಗಿಂತ ಹಳೆ ನಾಗರಿಕತೆ ಇಲ್ಲ ನಾಡಾಡಿಗಿಂತ ಹೆಚ್ಚು ಕಾಡಾಡಿ ಇಂದಿಲ್ಲ ಸೌಂದರ್ಯಕ್ಕಿಂತ ಹೆಚ್ಚಿನ ಕುರೂಪ ಇಂದು ಸಿಗಲಾರದು ಧೀರರಿಗಿಂತ ಹೆಚ್ಚಿನ ಹೇಡಿಗಳು ಭಾರತದಲ್ಲಿಲ್ಲ ಅಹಿಂಸಕರಿಗಿಂತ ಹೆಚ್ಚಿನ ಹಿಂಸಕರು ಹುಡುಕಿದರೆ ಸಿಗಬಹುದೆ? ದರ್ ಸಮಿತಿಗಿಂತ ಕುಶಾಗ್ರ ಬುದ್ಧಿಯ ರಾಜಕೀಯ ಸಮಿತಿ ಉಂಟೆ? ಪ್ರಾಂತೀಕರಣ ವಿರೋಧಿಗಳಿಗಿಂತ ಪ್ರಾಂತೀಕರಣಾನುರೋಧಿಗಳಿರುವರೆ? ಪರಮಾರ್ಥಿಗಳಿಗಿಂತ ಹೆಚ್ಚಿನ ಸ್ವಾರ್ಥಿಗಳನ್ನು ನೀವು ಕಂಡಿರುವಿರೇ? ಧ್ಯೇಯವಾದಿಗಳಿಗಿಂತ ಹೆಚ್ಚಿನ ಮಾಯಾವಾದಿಗಳನ್ನು ಬಲ್ಲಿರೇ? ಹರ ಚರಣ ಧವಳಾರವಿಂದ ಮಕರಂದ ಮಂದಾಕಿನೀ ಪ್ರವಾಹಗಳೇ, 'ಊಮಾ, ಊಮಾ,' ನೀವು ಊಟ ಮಾಡ ಬೇಡಿರಿ ಇದೇ ನಿಮಗ ಬೀಜ ಮಂತ್ರ ನೀವು ಊಟ ಮಾಡಿದರೆ ನಿಮಗೊಂದು ಪ್ರಾಂತವನ್ನು ತುಂಬಿಕೊಟ್ಟಂತಾಗುತ್ತದೆ ಅದರಿಂದ ಅನ್ನಮದವೆಂಬ ಪ್ರಾಂತವುದವುಂಟಾಗುತ್ತದೆ ಅರ್ಥಾತ್ ನಿಮಗೆ ಮಹೋದರ ಪ್ರಾಪ್ತಿಯಾಗುತ್ತದೆ ಆಗ ನಿಮಗೇ ನೀವು ಹೊಟ್ಟೆಯಿಂದ ಬೇರೆಂಬ ಆತ್ಮಜ್ಞಾನವುಂಟಾಗುತ್ತದೆ ಅದರಿಂದ ಹೊಟ್ಟೆಯಂತೆಯೇ ಇತರ ಅವಯವಗಳೂ ಪ್ರಾಂತೀಕರಣವನ್ನು ಸ್ಥಾಪಿಸಿಕೊಂಡು ನಿಮ್ಮ ದೇಹದ ಭಾರತೀಯ ಅಸ್ತಿತ್ವವನ್ನೇ ನಿರ್ನಾಮಗೊಳಿಸುವವು.

ಆದುದರಿಂದಲೆ ಜನಗಳೆ ಕೇಳಿ
ಸತ್ಯವನೆಂದಿಗು ತ್ಯಜಿಸದೆ ಬಾಳಿ
ಅವಯವಗಳ ಈ ಮೋಹವ ಬಿಟ್ಟು
ಕೇವಲ ನಾಶೊಬುದಕುಣಗೊಟ್ಟು

ಭಾಂಡಗಳನು ಬ್ರಹ್ಮಾಂಡವ ತೊರೆದು
ಹೋಗದ ಹಾಗಿಡಬೇಕೆದೆ ಬಿರಿದು
ಅಜ್ಜಿಯ ಮಾತಿಗೆ ಹೌದೆನ್ನುತ್ತ
ಅಜ್ಜನ ಗಡ್ಡವ ನೇವರಿಸುತ್ತ
ಗಂಜಿಯನೇ ಪಾಯಸವೆಂದುಂಡು
ಗುಂಜಿಸಿ ಗುಂಜಿಸಿ ಆಗಿರಿ ಗುಂಡು
ತರಿತೋಂ ಧಿಕ್ಕಿಟ, ತರಿತೋಂ ಧಿಕ್ಕಿಟ
ನಿಮ್ಮದು ನಿಮಗೇ ರಿಕ್ಕಟ ರಿಕ್ಕಟ
ಗಂಡರ ಕಾಲಿನ ಪೆಂಡೆಯವಾಗಿ
ಉಂಡವರಿಗೆ ಊಳಿಗದವರಾಗಿ
ಬಾಳುವುದಾಯ್ತೋದಾರ ಗುಣ!
ನಮಗೇತಕೆ ಪ್ರಾಂತಗಳ ಹೆಣ ?

'ಅಪ್ಪಿದ ಅಪ್ಪಿಗೆ ಬಿಡದಾಕೆ' ಎಂದು ಕವಿಗಳೊಬ್ಬರು ಚಳಿಯಾಕೆಯನ್ನು ವರ್ಣಿಸಿದರ 'ಎಲ್ಲಿದ್ದಾನೆ ಬೆಚ್ಚನೆಯಾತ?' ಎಂದು ಕೇಳುತ್ತ ಹೊರಟವರಂತೆ ಬಯಲು ಸೀಮೆಯ ಪುರಂಧ್ರಿಯರು ಅರುಣೋದಯದಲ್ಲಿ ನೀರು ತರಹೋದಾಗ ಬಹಳ ಕರುಣಾಸ್ಪದರಾಗಿ ಕಾಣುತ್ತಾರೆ. ಗಂಡನ ಕೂಡ ಗುದ್ದ್ಯಾಡಿದ 'ಗಂಡಸ್‌ತನ'ದ ಉಷೆ ಸೂರ್ಯನಾರಾಯಣನ ಸುಂದರ ಮುಖ, ಸುಖದಾಯಕ ಕರಗಳ ದರ್ಶನ ಸ್ಪರ್ಶನಗಳಿಗಾಗಿ ಹಾತೊರೆಯುವ ಕಾಲ ಗಂಗಾಧರನು 'ನಳ'ದ ಮೂಲಕ ಗಂಗೆಯನ್ನು ಬಿಡುವುದನ್ನೇ ಕಾದು ಕುಳಿತ ಗಂಡು ಗಚ್ಚಿಯ ಗೌರಿಯರು ಕೊಡಗಾಳಗಕ್ಕೆ ಸಿದ್ಧರಾಗುವ ಹುರುಪಿನ ಗುಡುಗುಡಿಕೆ, ಚಡಪಡಿಕೆ ಅವರ ಕರುಣಾಸ್ಪದತೆಯನ್ನು ಕಳೆದೊಗೆದು ಕರ್ಕಶತೆಯನ್ನು ಕೊಡದುಂಬಿಸುತ್ತದೆ. ಓಣಿ ಮನೆಯ ಬಸವಣ್ಣಾಕ್ಕನು ಅಷ್ಟರಲ್ಲಿ ಅಂದರೆ ಆ ಗುಡು ಗುಡು ಚಳಿಯಲ್ಲಿ ನಳ ಬರುವ ಹೊತ್ತಿಗೆ ಸರಿಯಾಗಿ ತನ್ನ ಹಂಡೆಗೊಡಗಳನ್ನು ಗಿರಣಿ ಕೂಗಿನ ಆಧಾರದಿಂದ ಹೊತ್ತಿಗೆ ಸರಿಯಾಗಿ ಹೊತ್ತು ತಂದು, ೪ ಕೊಡ

ಒಯ್ಯುವೆನೆಂದು ಕುಳಿತುಕೊಂಡಳು. ಅವಳು ಸಾಲೆ ಕಲಿತ ಹೆಣ್ಣು ಮಗಳಲ್ಲ. ೧೦ ಒಯ್ದರೂ ನಾಕೇ ಎನ್ನುತ್ತಾಳೆ. ಹುಚ್ಚಿಗೆ ಹೇಳ ಹೋದರೆ 'ನನಗೆ ನಿಮ್ಮ ಮೈಸೂರೀ ಮಾತು ತಿಳೀವಲ್ಲದು' ಎಂದು ಘಂಟಾನಾದ ಮಾಡುತ್ತಾಳೆ. ಅವಳ ಆ ಕಾಂಸ್ಯಕಂಠದ ಕೇಕಾರವವನ್ನು ಎದುರಿಸಬಲ್ಲ ದಶಕಂಠರನಾರು? ಹೇಳಿ ಕೇಳಿ ಹೆಣ್ಣುಮಗಳು; ಮಾತಿಗೆ ಮಾತಾಡಬಾರದಾದ ಕೂಡಲೆ 'ನಾನು ಹೆಣ್ಣು ಮಗಳು' ಎಂದು ತನ್ನ ಪುರುಷಾದಾರ್ಯದ ಪಾತ್ರತೆಯನ್ನು ಪಕ್ಕನಿಂದ ಸ್ಥಾಪಿಸಿಬಿಡುತ್ತಾಳೆ. ತನಗೆ 'ತೋಟಿಪ್ರ' ಬಹಳವೆಂದೂ ಏಕಾಕಿನಿಯಾದರೂ 'ಎಮ್ಮೆಗೋಡುಗಳ' ಚಾಕರಿ ಮಾಡಬೇಕಾಗಿದೆಯೆಂದೂ ತನ್ನ ಸಂಸಾರ ತಾಪತ್ರಯವನ್ನು 'ವ್ಯಾಘರೋಪ್ಸರೋ ಯಕ್ಷರಕ್ಷೋ ಗಂಧರ್ವ ಕಿನ್ನರಾಃ' ಎಂಬ ೩೩ ಕೋಟಿ ದೇವಗಣಗಳಿಗೂ ಕೇಳಿಸುವಂತೆ ಮೊರೆಯಿಡುತ್ತಾಳೆ! ಈ ವ್ಯವಹಾರ ನೈಪುಣ್ಯವೆಷ್ಟು ಜನಕ್ಕೆ ಗೊತ್ತಿದೆ? ಜಗತ್ತಿರುವುದು ಇಂಥ ಕುಶಲ ಕಲಾವಿದರಿಗೇ ಅಲ್ಲವೇ? ಈ ಅಹಿಂಸಾ ಮಾರ್ಗ, ನಾಗರಿಕ ತಂತ್ರ ಎಷ್ಟು ಜನರಿಗೆ ತಿಳಿದಿದೆ? ನಗರ ಸಭೆ ಮತ್ತು ಸರಕಾರದ ನೌಕರರು ತೆರಿಗೆ ಮುಂತಾದುವನ್ನು ವಸೂಲು ಮಾಡಬಂದಾಗಲೂ ಅವಳ ಆತ್ಮಸಮರ್ಥನೆ 'ತಾನು ಹೆಣ್ಣು ಮಗಳು, ಆದ್ದರಿಂದ ತನಗೆ ಕಡಿಮೆಯಾಗಿ ಕೊಡುವ ಮತ್ತು ತಡಮಾಡಿ ಕೊಡುವ ಸವಲತ್ತುಗಳು ಸಿಗಬೇಕು' ಎಂಬುದೇ ಆಗಿದೆ. ಸ್ತ್ರೀ ವಾದಿಗಳೂ ಸ್ತ್ರೀನೇತೃಗಳೂ ಇವಳ ಜಾಣ್ಮೆಯನ್ನೂ ಇವಳಂಥ ಅನುಯಾಯಿಗಳನ್ನೂ ಪಡೆದಿದ್ದರೆ ಇಷ್ಟರೊಳಗೆ ಜಗತ್ತಿನಲ್ಲೆಲ್ಲ ಪ್ರಮೀಳಾರಾಜ್ಯ ಸ್ಥಾಪನೆಯಾಗಿ ಹೋಗುತ್ತಿತ್ತಲ್ಲವೆ? ಆಗ ಅರ್ಜುನ ಕೂಡ ಅವಳ ದಾಸಾನುದಾಸನಾಗಿ ಬಿಡಬೇಕಾಗುತ್ತಿತ್ತಲ್ಲವೆ? ಇದೇ ಮಾತನ್ನು ನಮ್ಮ ರಾಮಲಿಂಗ ಮಠದ ಜಂಗಮರು ಸಂಗೀತವಾಗಿ ಹೀಗೆ ಹೇಳಿದ್ದಾರೆ

ಹೆಣ್ಣಾಗಿ ಹುಟ್ಟು ನೀ ಮನುಜ ॥ಪ॥
ಬಸ । ವಣ್ಣಾಗಿ ಬೆಳಿಯೋ ನೀ ಸ್ತ್ರೀನಂದಿರೂಪ ॥ಅ.ಪ॥
ಲೆಕ್ಕಾಚಾರಕೆ ಬೇಕಾದಾಗ
ನೀನು । ಅಕ್ಕಾ ಅಣ್ಣಾ ಎಂದು ಕರೆಯಬೇಕಣ್ಣ ।
ಬೆಕ್ಕಿನ ಹಾಗಿರಬೇಕು

ವೇಳೆ । ಸಿಕ್ಕಾಗ ಬೇಕಾದ್ದ ಪಡೆಯಬೇಕಣ್ಣ ॥೧॥
ಕೂಗಿ ಹೇಳುವ ಬಾಯಿ ಬೇಕು
ನೀನು । ಮೂಗಿಯಾದರೆ ಫಲವಿಲ್ಲ ಮಟ್ಟಾಳ ।
ಹಾಗೆ ಹೀಗೆಂದಾಡಬೇಕು
ನಿನ್ನ । ರಾಗವನೇರಿಸಿ ಗೂಣಗುಟ್ಟಬೇಕು ॥೨॥
ಹಂಡೆಯ ಚೆಂಬೆನ್ನ ಬೇಕು
ಬಂದ । ಗಂಡಸನೆದೆಗೊಟ್ಟು ಕೆಣಕಲು ಬೇಕು
ಪುಂಡತನಕೆ ಸೋಲದಾಗೆ
ತನ್ನ । ಮಂಡೆಯ ಹಿಡಿದತ್ತು ಮುಂಡಾಡಬೇಕು ॥೩॥
ಚಣಕೊಮ್ಮೆ ಜಗಳಾಡಬೇಕು
ಮರು । ಚಣದಲ್ಲಿ ಒಳ್ಳೆಯ ಮಾತಾಡಬೇಕು ।
ತೃಣರಂಗದಲ್ಲಿಯೂ ಕೂಡ
ಅತ್ತು । ಪಣವಿಡುವಭಿಮಾನವನು ತಾಳಬೇಕು ॥೪॥
ಅರ್ಥವಿಲ್ಲದ ಮಾತಿನಿಂದ
ಜಗ । ವರ್ಥಸಾಧನೆ ಮಾಡುವುದು ನೋಡು ನಿತ್ಯ ।
ಅರ್ಥದ ಮಾತಾಡೆ ನಿನ್ನ
ಜಗ । ತ್ಯರ್ತ ಕೊಂಡೊಯ್ದಾನು ಜೋಕೆ !
ಮಂದಾತ್ಮ ॥ ॥೫॥

◉ ◉ ◉ ◉

ಪರಮಾತ್ಮನ ಕೃಪಾಕಟಾಕ್ಷವೀಕ್ಷಣದಿಂದ ಚಂಚಲನಾದ ಮನ್ಮಥನು ನನ್ನನ್ನು ಇಷ್ಟು ಕಾಲವಾದರೂ ಬಿಡದೆ ಜೊತೆಗಿದ್ದಾನಲ್ಲ ಎಂದು ರಿಟಾಯಿರಾಗಲಿಕ್ಕೆ ಬಂದ ರತಿಯೊಬ್ಬಳು ಮುಂಬಯಿಯ ತನ್ನ ಸೌಧದ ಮೂರನೆಯ ಅಟ್ಟದಲ್ಲಿ ಕುಳಿತು ಆಗತಾನೆ ಗೃಹವನ್ನು ಪ್ರವೇಶ ಮಾಡಿದ ತನ್ನ ಹಳೆಯ ಗಿರಾಕಿಯನ್ನು ಕದ್ದು ನೋಡಿ ನಿಟ್ಟುಸಿರಿಟ್ಟಳಂತೆ ಹೀಗಾ ಜಮೀನುದಾರಿ ನಿರ್ಮೂಲನ ಕಾಯಿದೆಯನ್ನು ಪಾಸು ಮಾಡಿದಾಗ ಒಬ್ಬ ಜಮೀನುದಾರನಿಗೆ. ಜಮೀನುದಾರರನ್ನು ಎಲ್ಲರೂ ಬಯ್ಯುತ್ತಾರೆ. ಹಾಗಾ

ದರೆ ಸೂಳೆಯನ್ನೇಕೆ ಜೈಯ್ಯುವುದಿಲ್ಲ? ಎಂಬುದೇ ಅವನ ತರ್ಕ. ಜಮೀನ್ ಅವನಿಗೆ ಅಪ್ಪನಿಂದ ಬಂದಿರುವಂತೆ ಸೂಳೆಗೂ ದೇಹ ಅವಳಪ್ಪನೆಂಬ ಅನಾಮಧೇಯದಿಂದಲೇ ಬಂದಿರುವುದಲ್ಲವೆ? ಅಷ್ಟು ಹೊತ್ತಿಗೆ ಸರಿಯಾಗಿ ಅವನ ಆಲೋಚನೆಗೆ ಆಕಸ್ಮಾತ್ತಾಗಿ ಬೆಂಬಲ ಸಿಗಬೇಕೇ? ಅವನ ಪುತ್ರನಾದ ಆಧುನಿಕ ಕವಿಯೊಬ್ಬನು ಸಮಾಜ ಸುಧಾರಕ ಗೀತವೊಂದನ್ನು ಆಗತಾನೇ ರಚಿಸಿರುವೆನೆಂದು ತಂದು ಓದತೊಡಗಿದ —

ಸೂಳೆಗಿಂತ ಪರೋಪಕಾರಿ ಯಾರುಂಟು
ದೇಹವನೆ ಬಲಿದಾನ ಕೊಡುವಂಥ ನಂಟು
ಎನ್ನುವರ ಕಣ್ಣುಗಳು ಬರಿ ಕುಂಟು ಕುಂಟು
ಅವಳ ತ್ಯಾಗಕು ಮಿಗಿಲು ಮತ್ತೊಂದುಂಟು!
ಈ ಜಮೀನ್ದಾರನನು ನೋಡಿತ್ತ ನೋಡು
ಊರ ಜಗಳಗಳನ್ನು ತೀರಿಸುವ ಹಾಡು
ಅವನ ಜೀವನದುಸಿರು ಆವ ಶಾಂತ ಪೀರ
ಜನರ ತಲೆಗಳ ತಿದ್ದುವಾ ಕರ್ಮಕಾರ!
ದೇಹಕಿಂತಲು ತಲೆಯೆ ಮಿಗಿಲಲ್ಲವೇನು
ಅದನಾತ ನಿತ್ಯವೂ ರೈತರಿಗೆ ತಾನು
ನೀಡುವನು ಸುಖ ದುಃಖ ಸಮಭಾಗಿಯಾಗಿ
ತಲೆಗಾಹಿ ಯಾದವನು ತಲೆ ತೆಗೆವನೇನು?

ಊರಿಗೊಂದು ದಾರಿಯಾದರೆ ಪೋರನಿಗೊಂದು ದಾರಿ. ನಗೆಗಾರನದೊಂದು ಬಗೆಯಾದರೆ ಹೊಗೆ ಹಾರುವವನದಿನ್ನೊಂದು ಬಗೆ. ನಾನೂ ನಾಯಕ, ನೀನೂ ನಾಯಕ, ದೋಣಿ ಬತ್ತುವವ ದೋಣಪ್ಪ ನಾಯಕ; ಕಾಶ್ಮೀರದ ವಿಭಜನೆ ಮಾಡುವವ ಸಂಯುಕ್ತ ರಾಷ್ಟ್ರ ಸಂಘದ ಐತಪ್ಪ (ಅಯುಕ್ತಪ್ಪ) ನಾಯಕ. ಮತಕೊಡುವವನಿಗಿನ್ನೊಬ್ಬ ಮತ ಕೊಡುವವನಿರಬೇಡವೆ? ಸ್ವಂತ ಮತವಿಲ್ಲದವನಿಗೆ ಸ್ವಂತ ಮತವಾದರೂ ಇರಬೇಡವೆ? ಇದೇ ನೋಡಿರಿ ಅದ್ಭುತ ಕಾಶ್ಮೀರ ಘಟನ ಉಸ್ತಾದರ ಊರ

ವಣಿ! ಪ್ರಜಗಳಿಗೆ ಮತಕೊಡದೆ ಅವರು ಬರಿಗೈಯಿಂದ ಏನನ್ನು ಕೊಟ್ಟಾರು? ಆದ್ದರಿಂದ ಮತಪ್ರಚಾರಕ್ಕೆ ತಮಗೆ ಅವಕಾಶ ಕೊಡಬೇಕು 'ನಾವು ನಿಂತದ್ದು ನಮ್ಮ ಸ್ಥಾನ, ನಾವು ಹಾಡುವುದು ನಮ್ಮ ಗಾನ ಏನಯ್ಯ ನೌಜವಾನಾ, ಹೌದಂತೀಯೋ, ಸುಳ್ಳಂತೀಯೋ!' ಅಂತಾನೆ ಅದರ ಅಜಾದ ಷಹಜಾದ ಹಿಡಿದ ಷಹಜಾದೆ ಷಹಜಾದಳೇ, ಆಗಬೇಕಲ್ಲವೇ? ನಡೆಯಬಲ್ಲವನ ಒಡವೆ ನುಡಿಯಬಲ್ಲವ ಕೋಂದು ಹೋದಂತೆ ಪಾಕಿಸ್ತಾನವು ಬಾಯಿ ಪಟಾಕಿ ಹಾರಿಸಿ ಹಿಂದುಸ್ಥಾನ ರಕ್ಷಿಸಿದ ಕಾಶ್ಮೀರದ ದಾಯವನ್ನು ಒಯ್ಯಲು ಈಗಲೇ ವಾಗ್ವೈಖರಿಯನ್ನು ತೋರತೊಡಗಿದೆ ಅದರ ತರ್ಕ ಇಷ್ಟೆ—ನಾಗೋರೆ ಕೂಳು ನಾಯಿ ತಿನ್ನಬಾರದು, ಭಾಗಾದಿ ಸೊಲ್ಲು ಮೈದುನ ಕೊಳ್ಳಬಾರದು ಎಂದು ಹೀಗ ನಾಚಿಕೆ ತೆಗೆದು ನಾಗೊಂದಿಗೆಯಲ್ಲಿಟ್ಟು, ಭೀತಿ ತೆಗೆದು ತಿಪ್ಪೆಯಲ್ಲಿಟ್ಟು, ಇನ್ನು ಮುಂದೆ ಮಾಡೋದು ಮಾಡ್ಕೋ ನನ್ನ ಗಂಡ ಅಂತ ಕುಳಿತಿದೆ ಅದು ಇದಕ್ಕೆನ್ನಬೇಕು ನೋಡಿ ರಾಜನೀತಿಯೆಂದು! ಆವರೆ ಹಿರಿಯರು ಹೇಳದ ಮಾತೆಂದಾದರೂ ಸುಳ್ಳಾದೀತೇ? ಇಂಥ ಭಂಡ ಧೂರ್ತ ನಿಶಾಚರತ್ವಕ್ಕೆ ಅವರು ಹೇಳುವ ಮದ್ದೇಬೇರೆ—

ನಾಯಿಗೆ ಕೋಲು
ಕಾಗೆಗೆ ಕಲ್ಲು
ಎಮ್ಮೆಗೆ ಹಗ್ಗ
ಹತ್ತಿಗೆ ಮಗ್ಗ
ದುಡಿಯದೆ ಪಾಲಿಗೆ
ಬರುವ ಹೆಮಾಲಿಗೆ
ಹೋಗೋ ಹೋಗೆಂ
ದಿಡು ಬರೆ ಕಾಲಿಗೆ!

* * * *

೧|| ರೂಪಾಯಿಗೆ ಸೇರಕ್ಕಿಯಾಗಿರುವದು ಮತ್ತೊಂದು ಮಹಾಯುದ್ಧದ ಮುನ್ಸೂಚನೆಯೆ? ಎಂದು ಇಲ್ಲಿ ಕೇಳಲಾಗುತ್ತಿದೆ. ಇಲ್ಲಿ ಎಂದರೆ ಎಲ್ಲಿ? ೧|| ರೂಪಾಯಿಗೆ ಸೇರಕ್ಕಿಯಾದಲ್ಲಿ! ಅಕ್ಕಿ ಅಂದರೆ ಪ್ರಾಣ,

ನೆಂಟರು ಅಂದರೆ ಜೀವ—ಏನು ಮಾಡಬೇಕು ಹೇಳಿರಿ? ಅಗ್ಗದ ಅಶಿಗೆ ಮುಗ್ಗಿದ ಹುರುಳಿ ಅಂತ ಜೋಳ ತಂದು ರೊಟ್ಟಿ ಮಾಡೋ ಪ್ರಸಂಗ ಬಂತು. ಆದರೆ ಆ ಜೋಳವಾದರೂ ಚೆಲ್ಲೋದೇ? ಗಾದೆಯಲ್ಲಿದ್ದ ಹಾಗೇ ಮುಗ್ಗಿದ್ದು ಅಂದರೆ ಮುಗ್ಗಿದ್ದಲ್ಲ, ಹಳೆಯದು, ಹುಳು ತಿಂದದ್ದು ಅಡವಿಯ ಡೊಣ್ಣೆ ಪರದೇಶಿಯ ತಲೆ ಎಂಬಂತೆ ಸರಕಾರ ಸಾವಕಾರ ಎಂಬೆರಡು ಆನೆ ದಂತಗಳ ನಡುವೆ ಮಧ್ಯಮ ವರ್ಗದವರೆಂಬ ನಡುವಣ್ಣ ಸಿಕ್ಕಿ ಸಾಯಲೂ ಬರದೆ ಬದುಕಲೂ ಆಗದೆ ನರಳುತ್ತಿದ್ದರೂ ಹೇಳುವವರಿಲ್ಲ ಕೇಳುವವರಿಲ್ಲ "ಜನತೆಯ ನೈತಿಕ ಮಟ್ಟವೇ ಇಳಿದು ಹೋದಾಗ ನಾವೇನು ಮಾಡಬೇಕು? ಇದು ನಿಮ್ಮದೇ ಸರಕಾರವಲ್ಲವೇ? ನೀವು ಇದ ರಲ್ಲಿ ವಿಶ್ವಾಸವಿಡದಿದ್ದರೆ ಹೇಗೆ?" ಎಂದು ಸರಕಾರೀ ಮುಖಂಡರು ಬಾಯ ಬ್ರಹ್ಮವನ್ನು ನುಡಿಯುತ್ತಿರುವುದನ್ನು ಕೇಳಿದ ಕಾಲಜ್ಞಾನಿ ಕರಿಬಸವ ಶಿವಯ್ಯನವರು ಹೇಳುತ್ತಾರೆ —

ಅರಸ ಹೋಗಿ ಅಧ್ಯಕ್ಷ ಬಂದರೇ-
ನಕ್ಕಿ ಸಿಕ್ಕಲಕ್ಕೇ?
ಕಜ್ಜಿ ಹೋಗಿ ಕುರುವೆದ್ದರೇನು ಆ
ರೋಗ್ಯ ಲಾಭವಕ್ಕೇ?
ಹೆಣ್ಣು ಹೋಗಿ ಗಂಡಾದರು ಬಡವನೆ
ಕೂಗು ಕೇಳಿಸೀತ್ರೇ?
ಗಂಡು ಹೋಗಿ ಗುಂಡಾದರು ಕೃಷ್ಣಾ
ಪಣರ ಕೊಲ್ಲಲಕ್ಕೇ?

❀ ❀ ❀ ❀

ಅರಣ್ಯಾಶ್ರಮದ ಸಿದ್ಧನ ಬೋಧೆವೊಂದೇ ಅರಣ್ಯ ರೋದನ ಎಂದು ತಿಳಿದಿದ್ದ ನನಗೆ ಭಾರತದ ಮುಖ್ಯ ಮಂತ್ರಿಗಳ ಉಪದೇಶಗಳೂ ಅರಣ್ಯ ರೋದನವಾಗಿ ಪರಿಣಮಿಸಿವೆ ಎಂಬುದು ಇಂದಿನ ಪತ್ರಿಕೆ ನೋಡಿದಾಗ ತಿಳಿಯಿತು ಎಂದ ಬುಡುಬುಡಿಕೆ ಬೋರಣ್ಣ. ಯಾಕಪ್ಪ ಅಂದರೆ 'ಸಂಸ್ಕೃತಿ ಯೆಂಬುದು ಇಂದು ಪುಸ್ತಕಗಳಲ್ಲಿ ಬರೆದಿರುವ ಮಾತಾಗಿದ್ದು ಕೃತಿಗಳಲ್ಲಿ ಲೋಪವಾಗಿದೆ" ಎನ್ನುವ ನೆಹರು ಸಾಹೇಬರಿಗೆ ಅವಿವೇಕವೆಂಬುದು

ಅಸಂಸ್ಕೃತಿ, ಅದು ತಮ್ಮ ಮನೋವಾಕ್ಕಾಯ ಕರ್ಮಗಳಲ್ಲಿ ತಲೆ ಎಲ್ಲೆಲ್ಲಿ ಹಾಕಿದೆ ಎಂಬುದರ ಅರಿವಿಲ್ಲ–ಎಂದನವ ಮುಖ್ಯ ಮಂತ್ರಿಗಳ ಮೇಲೆ ಟೀಕೆ ಮಾಡುವುದು ಅಹಿಂಸಾತ್ಮಕವಲ್ಲ, ಪ್ರಜಾಸತ್ತಾತ್ಮಕವಲ್ಲ, ಸತ್ಯವಲ್ಲ, ನ್ಯಾಯವಲ್ಲ, ಸಂಸ್ಕೃತಿಯಲ್ಲ, ಸಭ್ಯತೆಯಲ್ಲ, ನಾಗರಿಕತೆಯಲ್ಲ—ಎಂದು ಸರಕ್ಕನೆ ಗರ್ಜಿಸಿದ, ದೇಭ ದತ್ತಾತ್ರೇಯ ಪಂಡಿತ ದೇಭಗಳಿಗೆ ವ್ಯಕ್ತಿ ಭಕ್ತಿಯಾತಕ್ಕಯ್ಯಾ? ಎಂದು ಲಿಂಗರಾಜಯ್ಯ ಸವಾಲು ಹಾಕಿಯೇ ಬಿಟ್ಟ ಮಹಾವ್ಯಕ್ತಿಗಳಿಂದಲೇ ಇತಿಹಾಸವಾಗುವುದು ಎಂಬುದ, ಪುರುಷೋತ್ತಮಾಚಾರ್ಯರ ವಿಭೂತಿವಾದ ಯಾರು ಮಹಾ ವ್ಯಕ್ತಿಗಳ ಎಂದು ನಿರ್ಣಯಿಸುವು ಮಹಾಕವಿಗಳಿಗೆ ಸೇರಿದ್ದು ಎಂದು ಮರಿಕಾಳಿದಾಸ ಮುದ್ದವೀರಪ್ಪ ಮುಸಿದೊರೆದ ಮಹಾಕವಿ ಬರೆದಗ್ಟಲ್ಲಿ ನಂಬುವ ಮೂರ್ಖತೆ ಇಂದಿನ ಇತಿಹಾಸಜ್ಞರಿಗಿಲ್ಲ ಎಂದು ಡಾ ದೊರಸ್ವಾಮಿಯವರ ಮರುಸವಾಲು ಅಂತೂ ಸಮಸ್ಯೆ ಬಗೆಹರಿಯಲಿಲ್ಲ ಅದಕ್ಕೆ ಭವರೋಗ ಭೇಷಜನೇ ಬರಬೇಕಾಯಿತು ಬುಡುಬುಡಿಕೆಯ ಬೋರಣ್ಣನ ಅಪ್ಪಿದ್ದಾ ನಲ್ಲಾ ಆ ಕೆಲಸ ಮಾಡುವುದಕ್ಕೆ—

ಸುಮ್ಮನೆ ಇರುವುದು ಸುಖಸಪ್ಪಾ
ನೀವ್ । ಕಮ್ಮಿದರ್ ಕಮ್ಯಾನಿಜಮ್ಮಪ್ಪಾ !
ನಿಮ್ಮದೆ ಇಂದಿನ ಸರಕಾರ
ನಿಮ । ಗೆಲ್ಲವು ದಕ್ಕೂ ದರಕಾರ
ನಿಮ್ಮ ಅಪ್ಪನನೆ ನೀವು ಬೈದರಿಂ
ದಾಗುವಿರೆಲ್ಲ ಕುಮಾರಪ್ಪ ||೧||
ಅಪ್ಪನ ಹೊಡೆತವೆಹಿಂಸೆಯಲಾ
ಕರಿ । ಯಪ್ಪನ ದಂಥೆಯ ಹಿಂಸೆಭಲಾ
ತುಪ್ಪದ ದೋಸೆಯು ಬೇಕೆಂದರೆ ಮಗ
ಹಿಂಸೆಯ ಹುಳುವಾದನು ತರಳ ||೨||
ಡಾಕ್ಟರು ಕೊಂದರೆ ವೈದ್ಯವದು
ರೇ । ಶನ್ನರೆಯೂಟ ಚಿಕಿತ್ಸೆಯದು
ಸಿಕ್ಕಾಬಟ್ಟೆಯ ಮಾತಾಡದಿರದು
ದಕ್ಕದು ನಾಗರಿಕರಿಗಿಂದು ||೩||

# ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

## (ಬಿನ್ನಹ)

ಸ್ನೇಹಿತರೇ,

೧೯೪೮ನೇ ಅಗಸ್ಟ್ ೧೫ನೇ ತಾರೀಖಿನಿಂದ ಈ ಸರ್ವೋದಯ ಸಾಹಿತ್ಯಮಾಲೆಯನ್ನು ನಾನು ನಡೆಸಿಕೊಂಡು ಬರುತ್ತಿದ್ದೇನೆ. ಮೂರು ತಿಂಗಳಿಗೊಂದರಂತೆ ವರುಷಕ್ಕೆ ಒಟ್ಟು ನಾಲ್ಕು ಗ್ರಂಥಗಳನ್ನು ಕೊಡುವುದು ಈ ಮಾಲೆಯ ಯೋಜನೆ ಮತ್ತು ಅದರಂತೆ ನಿಯತ ಕಾಲಕ್ಕೆ ಸರಿಯಾಗಿ ಇಷ್ಟರ ವರೆಗೂ ಅನೇಕ ಪುಸ್ತಕಗಳನ್ನು ಪ್ರಕಟಿಸಲಾಗಿದೆ ಇವುಗಳಿಗಿಂತಲೂ ದೊಡ್ಡ, ಉತ್ತಮ ಹಾಗೂ ಸರ್ವಾಂಗ ಸುಂದರವಾದ ಸಾಹಿತ್ಯ ಕೃತಿರತ್ನಗಳನ್ನು ಅರ್ಪಿಸಲು ಸಹಾಯ ಸಂಪತ್ತು ಅತ್ಯಗತ್ಯವಾಗಿದೆ ಆದುದರಿಂದ ತಾವೆಲ್ಲರೂ ಕೊಡುಗೈಯಿಂದ ಗ್ರಂಥಮಾಲೆಗೆ ಸಹಾಯ ನೀಡಬೇಕೆಂದು ಅರಿಕೆ

ಮಹನೀಯರೇ, ಅನೇಕ ವರುಷಗಳಿಂದ ನಾನು ಕನ್ನಡನಾಡು ಮತ್ತು ನುಡಿಗೆ ನನ್ನ ಅಳಿಲ ಸೇವೆ ಸಲ್ಲಿಸುತ್ತಾ ಬಂದಿರುವುದು ತಮಗೆ ತಿಳಿಯದ ವಿಷಯವೇನೂ ಅಲ್ಲ ೧೯೩೮ರಿಂದ ೧೯೪೮ರ ವರೆಗೆ ಎಂದರೆ ಹತ್ತು ವರುಷಗಳ ವರೆಗೆ "ಲೋಕಮತ, ಸಂಯುಕ್ತ ಕರ್ನಾಟಕ, ನವಯುಗ" ಮೊದಲಾದ ಪತ್ರಿಕೆಗಳಲ್ಲಿ ಉಪಸಂಪಾದಕನಾಗಿ ದುಡಿದುದುಂಟು ಆಗಿನ ಆ ಕಾಲವಲ್ಲಿ ಈ ಪತ್ರಿಕೋದ್ಯಮ ಕ್ಷೇತ್ರಕ್ಕೆ ಕಾಲಿಟ್ಟವರೇ ಕಡಿಮೆ ಅಲ್ಪ ಸಂಬಳಕ್ಕೆ ಹಗಲಿರುಳು ದುಡಿಯಬೇಕಾಗಿದ್ದ ಕಾಲವದು ಕನ್ನಡದ ಒಂದು ಸ್ವಾಭಿಮಾನ, ನಾಡಿನ ಒಂದು ಅಭಿಮಾನ ಇವೇ ಹೊಟ್ಟೆ ಬಾಯಿ ಕಟ್ಟಿಕೊಂಡು ಮಿಶ್ಯನರಿಯಂತೆ ಶ್ರಮಿಸಲು ಪ್ರೇರಕ ಶಕ್ತಿಗಳಾಗಿದ್ದುವು ನಾಡಿನ ಈ ಸೇವಾ ಬುದ್ಧಿಯಿಂದಲೇ ರಾಷ್ಟ್ರೀಯ ಚಳವಳಿಯಲ್ಲೂ ಭಾಗವಹಿಸಿದೆ ಮತ್ತು ೧೯೪೨ರ ಸ್ವಾತಂತ್ರ್ಯ ಹೋರಾಟದಲ್ಲಿ ಒಂದು ವರುಷದ ವರೆಗೆ ಬೆಳಗಾಂವಿ ಹಿಂಡಲಗಿ ಸೆರೆಮನೆಯ ವಾಸವನ್ನು ನುಭವಿಸಿದೆ.

ಗಾಂಧೀಜಿಯವರು ಜೀವಂತವಿದ್ದಾಗ, "ವಿಧಾಯಕ ಕಾರ್ಯದಲ್ಲಿ ಪ್ರವೃತ್ತರಾಗಿರಿ ಸ್ವಾವಲಂಬಿಯಾಗಿರಿ" ಎಂದು ಸಾಮಾಜಿಕ ಕಾರ್ಯಕರ್ತರಿಗೆ

ಬೋಧಿಸಿದುದುಂಟು ಅವರ ದಿವ್ಯ ಆದರ್ಶಕ್ಕೆ ಅಂಟಿಕೊಂಡೇ ಸ್ವಾವಲಂಬಿಯಾಗಿ ಜೀವನ ಸಾಗಿಸುವ ಉದ್ದೇಶದಿಂದ ಈ ಗ್ರಂಥಮಾಲೆಯನ್ನು ನಾನು ಆರಂಭಿಸಿದ್ದೇನೆ ಆದರೆ ಇದು ಸುಲಭ ಕಾರ್ಯವೇನೂ ಅಲ್ಲ ನಮ್ಮ ಪ್ರಾಂತದಲ್ಲಿ ಸಾಹಿತ್ಯಕ್ಕೆ ಪ್ರೋತ್ಸಾಹ ಅಷ್ಟಕಷ್ಟೇ ಮೊದಲೇ ಹಿಂದುಳಿದ ಪ್ರದೇಶ ಸಾಕ್ಷರ ಜನರೂ ಕಡಿಮೆ ವಿದ್ಯಾವಂತರೆಂದನ್ನಿಸಿಕೊಂಡವರಲ್ಲೂ ಪುಸ್ತಕಗಳನ್ನು ಕೊಂಡು ಓದುವ ಅಭ್ಯಾಸವಿಲ್ಲ ಯುದ್ಧೋತ್ತರ ಆರ್ಥಿಕ ಮುಗ್ಗಟ್ಟು ಜನರನ್ನು ಬಗ್ಗಿಸಿದೆ ಕರ್ನಾಟಕ ವಿವಿಧ ಆಡಳಿತೆಗಳೊಳಗೆ ಹರಿದು ಹಂಚಿ ಹೋಗಿರುವುದರಿಂದಲೂ ಸಾಹಿತ್ಯಕ್ಕೆ ಎಲ್ಲ ಭಾಗಗಳಲ್ಲೂ ಪ್ರೋತ್ಸಾಹ ದೊರೆಯುವುದಿಲ್ಲ ಹೀಗಾಗಿ ಗ್ರಂಥಮಾಲೆಯು ಆರ್ಥಿಕ ಅನಾನುಕೂಲತೆಗೊಳಗಾಗಿದೆ

ಗ್ರಂಥಮಾಲೆಯ ಯಶೋಭಿವೃದ್ಧಿಯನ್ನು ಬಯಸಿ ಈಗಾಗಲೇ ಅನೇಕ ಮಹನೀಯರು ಉದಾರ ಸಹಾಯ ನೀಡಿದ್ದಾರೆ ನೀವು ಕೂಡಾ ಗ್ರಂಥಮಾಲೆಯ ಆಶ್ರಯದಾತರು, ಹಿತಚಿಂತಕರು, ಪೋಷಕರು, ಅಥವಾ ಕೊನೆಗೆ ಚಂದಾದಾರರಾಗಿ ನಿಮ್ಮ ಕೈಲಾದ ಸಹಾಯ ನೀಡಬೇಕೆಂದು ವಿನಂತಿ ಹಿಂದೆ ಚಂದಾದಾರರಾದವರು ನಡುವ ಬಿಡದೆ ಖಾಯಂ ಸದಸ್ಯರಾಗಬೇಕೆಂದೂ ತಮ್ಮ ಇಷ್ಟಮಿತ್ರರು ಹಾಗೂ ತಮ್ಮ ಊರಿನ ವಾಚನಾಲಯ, ಗ್ರಂಥಾಲಯ ಮೊದಲಾದ ಸಂಘ ಸಂಸ್ಥೆಗಳ ಸದಸ್ಯತ್ವ ಮಾಡಿಕೊಟ್ಟು ನೆರವಾಗಬೇಕೆಂದೂ ಪ್ರಾರ್ಥನೆ,

**ಗ್ರಂಥಮಾಲೆಯ ಸಹಾಯ ಯೋಜನೆ ಇಂತಿದೆ**

೧) **ಆಶ್ರಯದಾತರು.**– ರೂ ೧೦೦ ಮತ್ತು ಅದಕ್ಕಿಂತ ಹೆಚ್ಚು ಕೊಡುವವರು ಅವರಿಗೆ ಯಾವಾಗಲೂ ಗ್ರಂಥ ಕೊಡಲಾಗುವದು

೨) **ಹಿತಚಿಂತಕರು** –ರೂ. ೨೫ ಅವರಿಗೆ ೭ವರ್ಷಗಳ ವರೆಗೆ ಗ್ರಂಥಗಳು

೩) **ಪೋಷಕರು**:– ರೂ ೧೦ ಅವರಿಗೆ ೩ ವರುಷ ಗ್ರಂಥಗಳು

೪) **ಚಂದಾದಾರರು** – ರೂ ೫ (ಅಂಚೆವೆಚ್ಚ ಕೂಡಿ)

ಹುಬ್ಬಳ್ಳಿ
೧೯ ೧೨-೫೦

**ಎಂ. ಹರಿದಾಸರಾವ್**
(ಸಂಪಾದಕ)

# ಪ್ರಕಟವಾದ ಗ್ರಂಥಗಳು

೧) ಕ್ರಿಸ್ಮಸ್ ಕಾಣಿಕೆ ಮತ್ತು ಇತರ ಕತೆಗಳು ಬೆಲೆ ೧-೦-೦
ಓಹೆನ್ರಿ, ವೆಲ್ಸ್, ಪೋಯಿ ಮೊದಲಾದ ಜಗತ್ತಿನ ವಿವಿಧ ರಾಷ್ಟ್ರಗಳ ಲೇಖಕರ ೧೩ ಚಿಕ್ಕ ಕಥೆಗಳು

೨) ಬದುಕಿನ ದಾರಿ (ಕಾದಂಬರಿ) ಲೆ ಹರಿದಾಸ್ ಬೆಲೆ ೧-೮-೦
ಹುಬ್ಬಳ್ಳಿಯ ಒಂದು ದೇಸಾಯೀ ಕುಟುಂಬದ ಕಥೆ ಸುಂದರ ಕಾದಂಬರಿ

೩) ಮರುಭೂಮಿಯ ಅರಬರು (ರಾಜಕಾರಣ) ಬೆಲೆ ೧-೮-೦
ಎಲ್ಲ ಅರಬ ರಾಷ್ಟ್ರಗಳ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕೃತಿ ವ್ಯಂಗ್ಯ ಚಿತ್ರಗಳು ಮತ್ತು ನಕ್ಷೆಗಳಿಂದ ತುಂಬಿದೆ

೪) ನಂದಾದೀಪದ ನಂದಿನಿ (ಚರಿತ್ರೆ) ಲೇ ಶ್ರೀಧರ ಬೆಲೆ ೧-೪-೦
ಶ್ರೀಮತಿ ವಿಜಯಲಕ್ಷ್ಮಿ ಪಂಡಿತರ ಜೀವನ ಚರಿತ್ರೆ ಇದರಲ್ಲಿ ಕಾಂಗ್ರೆಸ್ ಇತಿಹಾಸ, ನೆಹರೂ ಮನೆತನದ ವಿವರ ಮೊದಲಾದವುಗಳು ಇವೆ

೫) ಅವರು ಯುದ್ಧಕ್ಕೆ ಹೋಗಲಿಲ್ಲ ಲೇ ಕು ಶಿ ಭಟ್ ಬೆಲೆ ೧-೦-೦
ದಕ್ಷಿಣ ಕನ್ನಡ ಜಿಲ್ಲೆಯ ಜನಜೀವನಕ್ಕೆ ಸಂಬಂಧಿಸಿದ ಕಥೆಗಳು

೬) ಬಾಳಿನ ಗಿಡ (ಕಾದಂಬರಿ) ಲೇ ಹರಿದಾಸ್ ಬೆಲೆ ೨ ೧೨-೦
ನಿವೃತ್ತ ಶಾಲಾ ಉಪಾಧ್ಯಾಯರು ಪಡಭೂಮಿಗೆ ತೆರಳಿ ಅದನ್ನು ಕೃಷಿ ಮಾಡಿದ ಸರಸ ಕಾದಂಬರಿ ರಾಷ್ಟ್ರ ಕವಿ ಶ್ರೀ ಗೋವಿಂದ ಪೈಗಳವರ ಮುನ್ನುಡಿ

೭) ರಾಥೆಸ್ (ಕಲಾಸಂಕಲನ) ಬೆಲೆ ೧-೦-೦
ಪಾಂಡೇಶ್ವರ ಗಣಪತಿರಾಯರ ವಿದ್ವತ್ಪೂರ್ಣ ಪ್ರಬಂಧಗಳು

೮) ವಾಸನಾ (ನೀಳ್ಗತೆ) ಬೆಲೆ ೧-೦-೦
ಬಂಗಾಲಿ ಬರಹಗಾರರ ಕತೆಯನ್ನು ಆಧರಿಸಿ ಶ್ರೀ ಪಿ ವಿ ಆಚಾರ್ಯರು ಬರೆದ ಮನೋವಿಶ್ಲೇಷಣಾತ್ಮಕ ನೀಳ್ಗತೆ

೯) ಧಾರವಾಡದ ಹುಡುಗಿ (ಕಾದಂಬರಿ) ಲೇ ಹರಿದಾಸ್ ಬೆಲೆ ೧-೮-೦
ಒಂದು ಅಂದವಾದ ಪ್ರೇಮ ಕಥೆ

೧೦) ಉಕ್ಕಿನ ಮನುಷ್ಯ-ಸ್ಟಾಲಿನ್ ಲೇ. ಎಂ ಹರಿದಾಸ್ ಬೆಲೆ ೨-೦-೦
ಸ್ಟಾಲಿನ್ನನ ಹುಟ್ಟುಬಾಲ್ಯ, ರಶಿಯಾದ ಸ್ಥಿತಿ, ರಾಜ್ಯಕ್ರಾಂತಿ, ಸ್ಟಾಲಿನ್ನನ ರಾಜನೀತಿ, ಇಂದಿನ ರಶಿಯಾ ಅಮೇರಿಕಾ ಕಲಹ ಮೊದಲಾದ ಅಧ್ಯಾಯಗಳಿವೆ ಧಾರವಾಡದ ವಿದ್ಯಾವರ್ಧಕ ಸಂಘ ಮತ್ತು ಮದ್ರಾಸ ಲಿಟರರಿ

ಆರಂಭವಾದುದು  ೧೫ ಆಗಸ್ಟ್ ೧೯

# ಸರ್ವೋದಯ ಸಾಹಿತ್ಯ ಮಾಲೆ, ಹುಬ್ಬಳ್ಳಿ

ಸಂಪಾದಕರು ಎಂ. ಹರಿದಾಸರಾವ್

ಈ ಗ್ರಂಥಮಾಲೆಯು ಆಗಸ್ಟ್ [illegible] ರಲ್ಲಿ ಆರಂಭವಾಗಿದೆ ಮತ್ತು ಅಂದಿನಿಂದ ನಡೆಯುತ್ತ ಬಂದಿದೆ.

ಪ್ರತಿ ವರ್ಷದ ಆಗಸ್ಟ್ ೧೫ ರಿಂದ ವರುಷವು ಆರಂಭವಾಗುತ್ತ ಮೂರು ತಿಂಗಳಿಗೊಂದರಂತೆ ಒಟ್ಟು ನಾಲ್ಕು ಗ್ರಂಥಗಳನ್ನು ವರುಷ ಕೊಡುವೆವು.

ಈ ಸಾಹಿತ್ಯ ಮಾಲೆಯಲ್ಲಿ ಕತೆ, ಕಾದಂಬರಿ, ಏಕಾಂಕ ನಾಟಕ ಮೊದಲಾದ ಸರಸ ಸಾಹಿತ್ಯ ಮಾತ್ರವಲ್ಲ, ದೇಶ ವಿದೇಶಗಳ ರಾಜಕಾರಣ ಹಾಗೂ ಪಾಶ್ಚಾತ್ಯ ಪೌರ್ವಾತ್ಯ ತತ್ವಜ್ಞಾನಗಳ ಗ್ರಂಥಗಳನ್ನೂ ಕೊಡಲು ಯತ್ನಿಸುವೆವು.

ವರುಷದ ಯಾವುದೇ ಸಮಯದಲ್ಲಿ ಗ್ರಂಥಮಾಲೆಯ ಚಂದಾದಾರರಾಗಬಹುದು. ಅವರಿಗೆ ಆ ವರುಷಾರಂಭದಿಂದ ಪ್ರಕಟಿಸಿದ ಉಳಿದ ಪುಸ್ತಕಗಳನ್ನು ಕಳಿಸಲಾಗುವುದು.

ಚಂದಾದಾರರಿಗೆ ಹಿಂದಿನ ವರುಷಗಳ ಯಾವುದೇ ಗ್ರಂಥ ಬೇಕಾದಲ್ಲಿ ನಮಗೆ ಪತ್ರ ಬರೆದು ತಿಳಿಸಬೇಕು. ಮತ್ತು ಅವರಿಗೆ ಸವಲತ್ತು ಕೊಡಲಾಗುವುದು.

**ವಾರ್ಷಿಕ ಚಂದಾ ರೂ. ೫ (ಅಂಚೆ ವೆಚ್ಚ ಕೂಡಿ)**

## *Sarvodaya SahityaMala, Hubli*